ಆರನೆಯ ಪ್ರಕಟನೆ

# ಮಗಳಿಗೆ ತಂದೆಯ ಓಲೆಗಳು

ಜಗತ್ತಿನ ಪ್ರಾಚೀನ ಕಾಲದ ಸಂಕ್ಷಿಪ್ತ ವೃತ್ತಾಂತ

ಮಕ್ಕಳಿಗಾಗಿ ಬರೆದುದು



ಪಂ. ಜವಾಹರಲಾಲ ನೆಹರು

ಕನ್ನಡಿಸಿದವರು:

**ಶ್ರೀ. ಕಪಟರಾಳ ಕೃಷ್ಣರಾಯರು**

೧೯೪೬

ಮೊದಲನೆಯ ಮುದ್ರಣ ೧೯೪೧
ಎರಡನೆಯ ಮುದ್ರಣ ೧೯೪೩
ಮೂರನೆಯ ಮುದ್ರಣ ೧೯೪೫
ನಾಲ್ಕನೆಯ ಮುದ್ರಣ ೧೯೪೬

ಕನ್ನಡ ನಾಡಿನ ಚಿಕ್ಕ ಮಕ್ಕಳಿಗೆ

ಪ್ರಕಾಶಕರು:
ಮಂಗಳೂರು ಗೋವಿಂದರಾಯರು
ಸಾಹಿತ್ಯ ಭಾಂಡಾರ
ಹುಬ್ಬಳ್ಳಿ

ಮುದ್ರಕರು:
ಪಿ. ಯು. ಜಠಾರ, ಬಿ. ಎಸ್‌ಸಿ.,
ಕರ್ನಾಟಕ ಪ್ರಿಂಟಿಂಗ ವರ್ಕ್ಸ್
ಧಾರವಾಡ

# ಪರಿವಿಡಿ



# ಓಲೆಗಳ ಪರಿವಿಡಿ

ಓಲೆಗಳು — ಪುಟ

| ಓಲೆಗಳು | ಪುಟ |
| --- | --- |

# ಪ್ರಕಾಶಕರ ಅರಿಕೆ

ಈಗ ಸುಮಾರು ಐದು ವರುಷಗಳ ಹಿಂದೆ ನಾನು ನಿಜಾಮ ಕರ್ನಾಟಕದ ಕಲ್ಬುರುಗಿಗೆ ಹೋಗುವ ಆವಶ್ಯಕತೆ ಉಂಟಾಗಿತ್ತು. ಆಗ ಈ ಪುಸ್ತಕವನ್ನು ಕನ್ನಡಿಸಿ ಇದು ಬೆಳಕಿಗೆ ಬರಲು ಕಾರಣರಾದ ಶ್ರೀ. ಕಪಟರಾಳ ಕೃಷ್ಣರಾಯರಲ್ಲಿ ತಂಗುವ, ಅವರ ಅತಿಥಿಯಾಗುವ ಸುಯೋಗ ನನ್ನ ಪಾಲಿಗೆ ಬಂದಿತು. ಅಲ್ಲಿ ಕನ್ನಡ ಸಾಹಿತ್ಯದ ಮಾತು ಬಂದಾಗ ತಾವು ಮಾಡಿದ ಈ ಕೃತಿಯನ್ನು ತೋರಿಸಿ ಇದನ್ನು ಮುದ್ರಿಸುವುದಾದರೆ ನಮಗೆ ಅವಶ್ಯವಾಗಿ ಕೊಡುವುದಾಗಿ ಶ್ರೀ. ಕೃಷ್ಣರಾಯರು ಹೇಳಿದರು. 'ನೀರಿಳಿಯದ ಗಂಟಲಲ್ಲಿ ಕಡುಬನ್ನು ತುರುಕಿದಂತೆ', ಲಲಿತ ಸಾಹಿತ್ಯಕ್ಕೇ ನಮ್ಮಲ್ಲಿ ಪ್ರೋತ್ಸಾಹವಿಲ್ಲದಿರುವಾಗ ಭಾಷೆ, ಜನಾಂಗ, ಸಂಸ್ಕೃತಿ, ಸೂರ್ಯ, ಚಂದ್ರರ ವಿಷಯವನ್ನೊಳಗೊಂಡ ಇಂತಹ ಪುಸ್ತಕಕ್ಕೆ ಕನ್ನಡದಲ್ಲಿ ಮನ್ನಣೆ ದೊರೆಯಬಹುದೆ? ಎಂದು ಆಗ ನಾನು ಸ್ವಲ್ಪ ಅಳುಕಿದೆ. ಆದರೆ ಪುಸ್ತಕದೊಳಗಿನ ವಿಷಯ, ತಿಳಿಯದವರ ಮನಸ್ಸಿನಲ್ಲಿಯೂ ನಾಟುವಂತೆ ಹೇಳುವ ರೀತಿ, ಕನ್ನಡದಲ್ಲಿ ಬಂದ ಮೂಲ ಓಜಸ್ಸು ಇವುಗಳಿಂದ ಈ ಪುಸ್ತಕ ನನ್ನ ಮೆಚ್ಚಿಕೆಗೆ ಪಾತ್ರವಾಗಿತ್ತು. ಆದರೂ ಆಗ ನಾನು ಈ ಬಗೆಗೆ ಏನನ್ನೂ ಹೇಳುವಂತೆ ಇರಲಿಲ್ಲ. ಇದರಲ್ಲಿಯ ಹೊಸತನದಿಂದ ಧೈರ್ಯಗೊಂಡವನಾಗಿ, ಇದನ್ನು ಮುದ್ರಿಸಬೇಕೆಂದು ಮುಂದೆ ಒಂದು ವರುಷದ ಮೇಲೆ ಗೊತ್ತುಮಾಡಿಕೊಂಡೆ. ಹಸ್ತಪ್ರತಿಯನ್ನು ತಿದ್ದುವುದಕ್ಕೂ ಅಪ್ಪಣೆಗಾಗಿ ಪಂ. ಜವಾಹರಲಾಲರೊಡನೆ ಸ್ವಲ್ಪ ದೀರ್ಘವಾದ ಪತ್ರವ್ಯವಹಾರಕ್ಕೂ ಎಷ್ಟೋ ದಿನಗಳು ಹೋದವು. ಹೀಗೆ ಇದು ತಡವಾಗುತ್ತ ಆಗುತ್ತ ಇಂದಿನ ಸುಮುಹೂರ್ತದಲ್ಲಿ ವಾಚಕರ ಕೈಸೇರುತ್ತಿದೆ.

ಪಂ. ಜವಾಹರಲಾಲರು ಈ ಓಲೆಗಳನ್ನು ಬರೆದುದು ಚುರುಕಾದ ತೀಕ್ಷ್ಣಬುದ್ಧಿಯ, ಜ್ಞಾನಪಿಪಾಸೆಯುಳ್ಳ ೧೦-೧೧ ವರುಷದ ಹುಡುಗಿಯೊಬ್ಬಳಿಗೆ. ಇದರೊಳಗಿನ ವಿಷಯ ಮಾತ್ರ ದೊಡ್ಡವರಿಗೂ ತಿಳಿಯದಂತಹುದು. ಹೀಗಿದ್ದರೂ ಭಾಷೆಯ ಶೈಲಿಯಲ್ಲಿ ಆಕರ್ಷಣವಿದೆ, ಸರಳತೆ ಇದೆ; ಉಕ್ಕನ್ನೂ ಬೆಣ್ಣೆಯಂತೆ ಮಾಡುವ ಒಂದು ಸಾಮರ್ಥ್ಯವಿದೆ, ಒಂದು ಹೊಸತನವಿದೆ. ಶೈಲಿಯ

ಈ ಸ್ವಭಾವದಿಂದ ಶೀರ ದಡ್ಡನಿಗೂ ಚಿಕ್ಕಮಗುವಿಗೂ ಇದು ತಿಳಿಯುವಂತಿದೆ.

ಈ ಪುಸ್ತಕದ ಗುಣಗಳನ್ನು ಎತ್ತಿ ತೋರಿಸಲು ನಾನು ಹೊರಟಿಲ್ಲ. ಜಗತ್ತಿನ ಕೆಲವೇ ವ್ಯಕ್ತಿಗಳಲ್ಲಿ ಒಬ್ಬರಾದಂತಹ ಜವಾಹರಲಾಲರ ಬರಹದ ವಿಷಯದಲ್ಲಿ ಅಂತಹ ಯಾವ ಮಾತನ್ನಾಡುವುದೂ ನನ್ನ ಯೋಗ್ಯತೆಗೆ ಮೀರಿದುದು. ಇದಲ್ಲದೆ ಅಂತಹ ಕೆಲಸಕ್ಕೆ ಇದು ಸ್ಥಳವೂ ಅಲ್ಲ ಆದರೆ ಕನ್ನಡದಲ್ಲಿ ಈ ವಿಷಯವನ್ನು ಕುರಿತು ಪುಸ್ತಕವಿಲ್ಲವೆಂದು ಹೇಳಬಲ್ಲೆ. ನನಗೆ ತಿಳಿದ ಮಟ್ಟಿಗೆ ಈ ವಿಷಯದಲ್ಲಿ ಇದೇ ಮೊಟ್ಟಮೊದಲಿನ ಪುಸ್ತಕ. ದೇಹದಲ್ಲಿಯೂ ಬುದ್ಧಿಯಲ್ಲಿಯೂ ಎಳೆಯರಾದ ಚಿಕ್ಕಮಕ್ಕಳಿಗೆ ಮಾತ್ರವಲ್ಲದೆ ದೇಹದಿಂದ ಬೆಳೆದು ಬುದ್ಧಿಯು ಬೆಳವಣಿಗೆಯಾಗದ ಹಿರಿಯರಿಗೂ ಇದು ಉಪಯುಕ್ತವಾದೀತು ಇದಲ್ಲದೆ ನಮ್ಮಲ್ಲಿಯ ಎಷ್ಟೋ ಮೂಢ ನಂಬಿಗೆಗಳನ್ನು ಇದು ಕಿತ್ತೊಗೆಯುತ್ತದೆ. ಕೃತಯುಗ ಜಗತ್ತಿನ ಶೀರ ಆರಂಭ ಕಾಲ; ಒಳ್ಳೇ ಸುಸಂಸ್ಕೃತ ಕಾಲ ಅಂದಿನಿಂದ ಕಲಿಯುಗದೊಳಗಿನ ಇಂದಿನ ವರೆಗೂ ಜಗತ್ತು ಕೆಡುತ್ತಿದೆ; ಜನರು ಅಶಕ್ತರಾಗುತ್ತಿದ್ದಾರೆ; ಸುಳ್ಳು, ಮೋಸ, ತಟವಟಗಳು ಹೆಚ್ಚಾಗುತ್ತಿವೆ; ನಾಗರಿಕತೆಯ ಮೇಲ್ಮಟ್ಟದಿಂದ ಮಾನವನು ಕಾಡುತನದ ನಿಕೃಷ್ಟಸ್ಥಿತಿಗೆ ಇಳಿಯುತ್ತಿದ್ದಾನೆ; ಮುಂದೆಯೂ ಹಾಗೆಯೇ; ಎಂಬ ನಮ್ಮ ಹಳೆಯ, ಆಧಾರಗಳಿಲ್ಲದ, ಸಿದ್ಧಾಂತಗಳಿಗೆ ಇಲ್ಲಿ ತಕ್ಕ ಉತ್ತರ ದೊರೆಯುತ್ತದೆ. ಒಟ್ಟನಲ್ಲಿ ಮಕ್ಕಳಿಗೆ ಇದು ಜಗತ್ತಿನ ಬಾಲ್ಯವನ್ನು, ಜಗತ್ತು ಕ್ಷಣಕ್ಷಣಕ್ಕೂ ವಿಕಾಸ ಹೊಂದುತ್ತಿರುವುದನ್ನು ಹೇಳಿಕೊಡುತ್ತದೆ; ದೊಡ್ಡವರಿಗೆ ನಿಜವಾದ ಜಗತ್ತೆಂದರೆ ಏನು, ಎಂಬುದನ್ನು ಯೋಚಿಸತೊಡಗಿಸುತ್ತದೆ.

ಪಂ. ಜವಾಹರಲಾಲರ ಈ ಪುಸ್ತಕವನ್ನು ಕನ್ನಡಿಸಿ ಅಂತಹ ಮಹಾವ್ಯಕ್ತಿಗಳ ಸಾಹಿತ್ಯವನ್ನು ನಮ್ಮ "ಭಾಂಡಾರ"ದ ಓದುಗರಿಗೆ ಒದಗುವಂತೆ ಮಾಡಿದ ಶ್ರೇಯಸ್ಸು ಶ್ರೀ. ಕಪಟರಾಳ ಕೃಷ್ಣರಾಯರಿಗೆ ಸಲ್ಲಬೇಕು. ಪಂ. ಜವಾಹರಲಾಲರ ಅಪ್ಪಣೆ ದೊರಕಿಸಲು ನಮಗೆ ಸರಿಯಾದ ಹಾದಿ ತೋರಿಸಿದವರು ಡಾ. ಹರಡೀಕರರು ನಮ್ಮ ಈ ಹಿರಿಯ ಮುಂದಾಳುಗಳ ನೆರವು ಸಿಕ್ಕಿರದಿದ್ದರೆ ನಮ್ಮ ಕೆಲಸ ಅಲ್ಲಿಯೇ ನಿಲ್ಲುತ್ತಿತ್ತು. ಮುದ್ರಣಕ್ಕಾಗಿ ಸಿದ್ಧವಾದ ಹಸ್ತಪ್ರತಿ ನಮ್ಮ ಕೈಗೆ ಬಂದ ಮೇಲೆ, ಅದನ್ನು ನನ್ನಿಂದ ಸಂಪೂರ್ಣ

ವಾಗಿ ಓದಿಸಿ, ಕೇಳಿ, ಕೆಲವು ಕಡೆಗಳಲ್ಲಿ ತಿದ್ದಿದವರು ಹುಬ್ಬಳ್ಳಿಯ ಆ್ಯಡ್ಮಿನಿಸ್ಟ್ರೇಟಿವ್ ಆಫೀಸರರಾದ ಶ್ರೀ. ಸ. ಪ. ಗಾವಕರ ಬಿ. ಎ. ಅವರು. ಆದುದರಿಂದ ಭಾಷಾಂತರಕಾರರ ಪರವಾಗಿ ಶ್ರೀ. ಸ. ಪ. ಗಾವಕರರ ಅಭಾರಮನ್ನಿಸುವುದೂ ನನ್ನ ಕರ್ತವ್ಯ. ಮುದ್ದಾಗಿ, ಆದರೆ ತೀರ ಅಲ್ಪಾವಧಿಯಲ್ಲಿ ಮುದ್ರಿಸಿದವರು ಸಂಯುಕ್ತ ಕರ್ನಾಟಕ ಮುದ್ರಣಾಲಯದವರು. ಇವರೆಲ್ಲರಿಗೂ ನಾವು ಋಣಿಗಳು ತಮ್ಮ ಪುಸ್ತಕವನ್ನು ಕನ್ನಡದಲ್ಲಿ ಮುದ್ರಿಸಲು ಅಪ್ಪಣೆ ಕೊಟ್ಟು ಅನೇಕ ಸಲಹೆ ಸೂಚನೆಗಳನ್ನಿತ್ತ ಪಂ. ಜವಾಹರಲಾಲರಿಗೆ ಅನಂತ ಕೃತಜ್ಞತೆಗಳು.

ಚೈತ್ರ ಶುದ್ಧ ಪ್ರತಿಪದೆ,<br>ಚಾಲುಕ್ಯ ವಿಕ್ರಮ ವರ್ಷ ೮೬೬<br>೨೮—೩—೧೯೪೧

ಪ್ರಕಾಶಕ

## ನಾಲ್ಕನೆ ಮುದ್ರಣದ ಅರಿಕೆ

ಈ ಪುಸ್ತಕವನ್ನು ಧಾರವಾಡ ಜಿಲ್ಲೆಯ ಹೈಸ್ಕೂಲುಗಳ ನಾಲ್ಕನೆ ತರಗತಿಗೆ ೧೯೪೩–೪೪ರಿಂದ ಉಪಪಠ್ಯಪುಸ್ತಕವೆಂದು ಗೊತ್ತುಮಾಡಿದ ಧಾರವಾಡ ಜಿಲ್ಲೆಯ ಮುಖ್ಯೋಪಾಧ್ಯಾಯರ ಸಮಿತಿಗೆ ನಾವು ಕೃತಜ್ಞರು. ಮತ್ತು ಹೊತ್ತಿಗೆ ಸರಿಯಾಗಿ ಮುದ್ರಿಸಿಕೊಟ್ಟ ಧಾರವಾಡದ ಕರ್ನಾಟಕ ಪ್ರಿಂಟಿಂಗ್ ವರ್ಕ್ಸಿನ ವ್ಯವಸ್ಥಾಪಕರಿಗೆ ನಾವು ಋಣಿಗಳು.

—ಪ್ರಕಾಶಕ

## ಭಾಷಾಂತರಕಾರನ ಎರಡು ಮಾತುಗಳು

ಪಂಡಿತ ಜವಾಹರಲಾಲ ನೆಹರೂ ಅವರು ಮಕ್ಕಳಿಗಾಗಿ ಬರೆದ "Father's letters to his daughter" ಎಂಬ ಇಂಗ್ಲಿಷು ಪುಸ್ತಕದ ಭಾಷಾಂತರವಿದು. ಇದನ್ನು ಕನ್ನಡಿಸಿರುವುದೂ ಮಕ್ಕಳಿಗಾಗಿಯೆ.

ಗ್ರಂಥಸ್ಥ ಭಾಷೆಗೂ ಮಾತನಾಡುವ ಭಾಷೆಗೂ ಕನ್ನಡದಲ್ಲಿ ವ್ಯತ್ಯಾಸ ವಿರುವಾಗ, ಭಾಷಾಂತರ ಆದಷ್ಟು ಸುಲಭವಾಗಿರಬೇಕೆಂಬ ದೃಷ್ಟಿಯುಳ್ಳ ನಾನು ಪುಸ್ತಕದ ಭಾಷೆಗಿಂತ ಮನೆಮಾರು, ಹಳ್ಳಿಪಳ್ಳಿಗಳಲ್ಲಿ ಬಳಕೆ ಇರುವ ನುಡಿಗೆ ಮಹತ್ವಕೊಡಬೇಕಾಯಿತು. ಅದರಿಂದ ನಮ್ಮ ನಿಜಾಮ್ ಕರ್ನಾಟಕ ದಲ್ಲಿಯ ಎಷ್ಟೋ ಶಬ್ದಗಳೂ ವಾಕ್ಪ್ರಯೋಗಗಳೂ ತಾವಾಗಿಯೆ ಬರತೊಡಗಿ ದವು. ಆದರೆ ಉಳಿದ ಭಾಗಗಳ ಕನ್ನಡಿಗರಿಗೆ ಇದನ್ನು ಓದಿ ತಿಳಿಯಲು ತೊಂದರೆಯಾದೀತೆಂಬ ಭಯ ಮಾತ್ರ ತಪ್ಪಲಿಲ್ಲ. ಆ ಸೀಮೆಗಳ ಹಳ್ಳಿಗಳ ನುಡಿಯ ಪರಿಚಯ ನನಗಿಲ್ಲ. ಅದರಿಂದ ತುಲನೆ ಮಾಡಿ ನೋಡುವುದು ಅಸಾಧ್ಯವಾಯಿತು. ಆದರೂ ಹೊಸ ಶಬ್ದಗಳನ್ನು ಕಲ್ಪಿಸುವಾಗ ಅವು ಎಲ್ಲ ರಿಗೂ ತಿಳಿಯಬೇಕೆಂಬ ದೃಷ್ಟಿಯನ್ನಿಡಲಾಗಿದೆ. ಒಂದೆರಡು ಕಡೆಗೆ ಇವುಗಳ ಇಂಗ್ಲಿಷು ರೂಪವನ್ನು ಕೂಡ ಬಳಸಲಾಗಿದೆ.

ಭಾಷಾಂತರದ ಕೆಲಸ ಮುಗಿದ ಮೇಲೆ ಇದನ್ನು ತಿದ್ದಲು ನನ್ನ ಗೆಳೆ ಯರೂ ಕಲ್ಬುರ್ಗಿ ಉಸ್ಮಾನಿಯಾ ಕಾಲೇಜಿನ ಕನ್ನಡ ಅಧ್ಯಾಪಕರೂ ಆದ ಶ್ರೀ. ತವಗದ ಭೀಮಸೇನರಾಯರು, ಎಂ. ಎ., ಬಿ. ಟಿ. ಇವರಿಗೆ ಒಪ್ಪಿಸಿದೆನು. ಅವರ ಒಲವು ಈಗಿನ ಹೊಸಗನ್ನಡದ ಕಡೆಗೆ. ನಿಜಾಮ ಕನ್ನಡದ ಬಳಕೆಯ ನುಡಿಯನ್ನು ಬಲ್ಲ ಅವರು ನನ್ನ ಎಷ್ಟೋ ಪ್ರಯೋಗಗಳನ್ನು ತೆಗೆದುಹಾಕಿ, ಕೆಲವಕ್ಕೆ ಹೊಸ ರೂಪು ಕೊಟ್ಟು ತಿದ್ದಿ ನಮ್ಮಿಬ್ಬರಿಗೂ ಒಪ್ಪಿಗೆಯಾಗುವಂತೆ ಮಾಡಿದರು. ಶುದ್ಧಪ್ರತಿಯನ್ನು ಬರೆದವರೂ ಅವರೇ.

ಇದೆಲ್ಲ ಮುಗಿದು ಆರು ವರ್ಷಗಳಾಗಿದ್ದರೂ ಹಸ್ತಪ್ರತಿ ಪ್ರಕಾಶವನ್ನು ಕಾಣದೆ ಹಾಗೆಯೆ ಉಳಿಯಿತು. ಹುಬ್ಬಳ್ಳಿಯ ಸಾಹಿತ್ಯ ಭಂಡಾರದ ಒಡೆ ಯರು ಅಕಸ್ಮಾತ್ತಾಗಿ ಇಲ್ಲಿಗೆ ಬಂದಾಗ ಇದನ್ನು ನೋಡಿ ತಾವು ಪ್ರಕಾಶಕ್ಕೆ ತರುವುದಾಗಿ ಒಪ್ಪಿಕೊಂಡರು. ಪ್ರಕಾಶಕರು ಅಖಿಲ ಕರ್ನಾಟಕದ ದೃಷ್ಟಿ ಯನ್ನಿಡಬೇಕಾಗುವುದು. ಅದರಿಂದ ಅವರು ಪ್ರತಿಯನ್ನು ತಿದ್ದಲು ತಿರಿಗಿ ನಮ್ಮಲ್ಲಿಗೆ ಬಂದರು. ಮುಂದೆ ಮೂವರೂ ಕೂಡಿ ಅದನ್ನು ಓದಿದೆವು.

ಇಷ್ಟೆಲ್ಲ ಸಂಸ್ಕಾರಗಳಾದರೂ ನನ್ನ ಮೂಲ ಧೋರಣ ಉಳಿಯಲೇ ಬೇಕಾದುದರಿಂದ ಕೆಲವು ಶಬ್ದಗಳಿಗೆ ಅರ್ಥ ಕೊಡುವುದು ಅನಿವಾರ್ಯ

ವಾಯಿತು. ಮೂಲ ಗ್ರಂಥದ ಸಾಮರ್ಥ್ಯವನ್ನು ಕನ್ನಡದಲ್ಲಿ ತರಲು ಶಕ್ತ್ಯಾನುಸಾರ ಯತ್ನಿಸಲಾಗಿದೆ. ಅದು ಎಷ್ಟರ ಮಟ್ಟಿಗೆ ಸಾಧ್ಯವಾಗಿದೆಯೆಂಬುದನ್ನು ಓದುಗರೇ ನಿರ್ಣಯಿಸಬೇಕು.

ಮೂಲ ಗ್ರಂಥವನ್ನು ಒದಗಿಸಿ ಕೊಟ್ಟು, ಅದನ್ನು ಕನ್ನಡಿಸಲು ನನ್ನನ್ನು ಪ್ರೋತ್ಸಾಹಿಸಿ, ಮೇಲಿಂದ ಮೇಲೆ ಸೂಕ್ತ ಸಲಹೆಗಳನ್ನಿತ್ತ ನನ್ನ ಗೆಳೆಯರಾದ ಶ್ರೀ ಹನುಮಸಾಗರ ವಾಜೇಂದ್ರರಾಯರಿಗೂ ವಿಶೇಷತಃ ಅದನ್ನು ಪರಿಷ್ಕರಿಸುವಲ್ಲಿ ಶ್ರಮವಹಿಸಿದ ಗೆಳೆಯ ಶ್ರೀ. ತವಗದ ಭೀಮಸೇನರಾಯರಿಗೂ ನಾನು ಚಿರಋಣಿ. ಈ ಗ್ರಂಥವನ್ನು ಬೆಳಕಿಗೆ ತಂದ ಸಾಹಿತ್ಯ ಭಾಂಡಾರದ ಶ್ರೀ. ಮಂಗಳೂರು ಗೋವಿಂದರಾಯರಿಗೆ ಮತ್ತೊಮ್ಮೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಕೊನೆಗೆ ಕನ್ನಡ ಮಹಾಜನರಲ್ಲಿ ನನ್ನ ಇದೊಂದು ವಿಜ್ಞಾಪನೆ:—

ಅವಧರಿಪುದು ವಿಬುಧರ್ ದೋ ।
ಷವಿದರೊಳೇನಾನುಮುಳ್ಳೊಡಂ ಪ್ರಿಯದಿಂ ತಿ ॥
ರ್ದುವುದು ಗುಣಯುಕ್ತಮುಂ ದೋ ।
ಷ ವಿದೂರಮುಮಾಗೆ ಮೆಚ್ಚಿ ಕೈಕೊಳ್ವುದಿದಂ ॥ (ಕೇಶಿರಾಜ)

ಕಲ್ಬುರ್ಗಿ,
೨—೩—೧೯೪೦

ಕನ್ನಡಿಗರ ಅಡಿಯಾಳು,
ಕಪಟ್ರಾಳ ಕೃಷ್ಣ

## ಇಂಗ್ಲಿಷ್ ಆವೃತ್ತಿಗೆ

## ಪಂಡಿತ ಜವಾಹರಲಾಲರ

# ಮುನ್ನುಡಿ

ನನ್ನ ಮಗಳು ಇಂದಿರೆ ೧೯೨೮ರ ಬೇಸಿಗೆಯಲ್ಲಿ ಹಿಮಾಲಯದ ಮಸೂರಿಯಲ್ಲಿದ್ದಳು. ನಾನು ಕೆಳಗಿನ ಬೈಲುಪ್ರದೇಶದಲ್ಲಿ, ಅಲಹಾಬಾದಿನಲ್ಲಿದ್ದೆನು ಆಗ ಅವಳಿಗೆ ಬರೆದ ಓಲೆಗಳಿವು. ಇವು, ಹತ್ತು ವರುಷದ ಚಿಕ್ಕ ಹುಡುಗಿಯೊಬ್ಬಳಿಗೆ ಬರೆದ ನಮ್ಮ ನಮ್ಮೊಳಗಿನ ಕಾಗದಗಳು. ತಮ್ಮ ಸಲಹೆಗಳ ಮೂಲಕ ನನ್ನ ಆದರಕ್ಕೆ ಪಾತ್ರರಾದ ಸ್ನೇಹಿತರು ಈ ಓಲೆಗಳಲ್ಲಿ ಕೆಲವು ಗುಣಗಳನ್ನು ಕಂಡು ಇವುಗಳನ್ನು ಹತ್ತು ಜನರೆದುರು ಇಡಲು ನನಗೆ ಸೂಚಿಸಿದರು. ಉಳಿದ ಹುಡುಗರೂ ಹುಡುಗಿಯರೂ ಇವುಗಳನ್ನು ಮೆಚ್ಚುವರೊ ಇಲ್ಲವೊ ನನಗೆ ತಿಳಿಯದು. ಆದರೆ ಇವುಗಳನ್ನು ಓದಿದವರು ಈ ಜಗತ್ತೆಂದರೆ ಬೇರೆ ಬೇರೆ ರಾಷ್ಟ್ರಗಳ ದೊಡ್ಡ ಕುಟುಂಬವೆಂದು ತಿಳಿಯಲು ಕಲಿಯುವರೆಂದು ನನ್ನ ನಂಬುಗೆ. ನಾನು ಇವುಗಳನ್ನು ಬರೆಯುವಾಗ ನನಗೆ ಆದ ಆನಂದದ ಒಂದಂಶವನ್ನಾದರೂ ಓದುಗರು ಪಡೆಯುವರೆಂದು ಸಂಕೋಚದಿಂದಲಾದರೂ ನಾನು ತಿಳಿಯುತ್ತೇನೆ.

ಈ ಪತ್ರಗಳನ್ನು ಬರೆಯುವುದನ್ನು ಒಮ್ಮಿಂದೊಮ್ಮೆ ನಿಲ್ಲಿಸಲಾಗಿವೆ ನಿಡಿದಾದ ಬೇಸಗೆ ಮುಗಿಯಿತು. ಇಂದಿರೆ ಪರ್ವತಪ್ರದೇಶದಿಂದ ಕೆಳಗಿನ ಸೀಮೆಗೆ ಬರಬೇಕಾಯಿತು. ೧೯೨೯ ರಲ್ಲಿ ಅವಳು ಮಸೂರಿಗಾಗಲಿ ಇಲ್ಲವೆ ಇನ್ನಾವ ಬೇಸಿಗೆಯ ಬೀಡಿ (Hill station) ಗಾಗಲಿ ಹೋಗಲಿಲ್ಲ. ಕೊನೆಯ ಮೂರು ಓಲೆಗಳು ಹೊಸಕಾಲವೊಂದನ್ನು ಕುರಿತವು. ಈ ಸಂಗ್ರಹದಲ್ಲಿ ಇವುಗಳಿಗೆ ಎಡೆಗೊಟ್ಟದ್ದು ಅಷ್ಟೇನೂ ಸರಿಯಾದುದಲ್ಲ. ಆದರೆ ಇವುಗಳನ್ನು ಇನ್ನೂ ಬೆಳೆಯಿಸುವ ಸಂದರ್ಭವಿಲ್ಲದುದರಿಂದ ಇಲ್ಲಿ ಸೇರಿಸಲಾಗಿದೆ.

ಈ ಓಲೆಗಳು ಇಂಗ್ಲಿಷಿನಲ್ಲಿರುವುದರಿಂದ ಹೆಚ್ಚು ಜನರಿಗೆ ಉಪಯೋಗವಾಗಲಾರವು. ಇದನ್ನು ನಾನು ಬಲ್ಲೆ. ಇದರ ಎಲ್ಲ ತಪ್ಪೂ ನನ್ನದು. ಈಗ ಇದನ್ನು ಭಾಷಾಂತರಿಸಿ ಮಾತ್ರ ನಾನು ಈ ತಪ್ಪನ್ನು ತಿದ್ದಿಕೊಳ್ಳಬಲ್ಲೆ. ಈಗ ಇದನ್ನು ಹಿಂದಿಯಲ್ಲಿ ಭಾಷಾಂತರಿಸುವ ಕೆಲಸ ನಡೆದಿದೆ. ಎಲ್ಲವೂ ಸರಿಯಾಗಿ ನಡೆದರೆ ಅದು ಬೇಗನೇ ಬೆಳಕನ್ನು ಕಾಣಬಹುದು.

ಅಲಹಾಬಾದು
ನವೆಂಬರು, ೧೯೨೯

**ಜವಾಹರಲಾಲ ನೆಹರು**

# ತಪ್ಪು—ಒಪ್ಪು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೧ | ೮ | ಭೂಮಿಂತ | ಭೂಮಿಗಿಂತ |
| ೨೧ | ೨೦ | ಇತರಂತೆ | ಇದರಂತೆ |
| ೨೩ | ೮ | ಮಾಡಬೇಕು | ಮಾಡಿರಬೇಕು |
| ೨೩ | ೨೨ | ಬಲದಿಂದ. | ಬಲದಿಂದ |
| ೨೬ | ೨೬ | ಬೆಳಸತೊಡಗಿದರು | ಕಂಡುಹಿಡಿದರು |
| ೨೬ | ೨೭ | ಕಂಡುಹಿಡಿದರು | ಬೆಳಸತೊಡಗಿದರು |
| ೩೧ | ೪ | ಜಾಯಿಂದ | ಜಾತಿಯಿಂದ |
| ೩೬ | ೧೫ | ಬಗಿ | ಬಗೆ |
| ೪೧ | ೧೩ | ಗುಂಟನೇಟಿಗೆ | ಗುಂಡಿನೇಟಿಗೆ |
| ೪೨ | ೯ | ಮಹಾಯುಧ | ಮಹಾಯುದ್ಧ |
| ೪೪ | ೨೩ | ಕಷ್ಟಮಯವಾಗುತ್ತಿತ್ತು | ಕಷ್ಟಮಯವಾಗಿರುತ್ತಿತ್ತು. |
| ೫೦ | ೯ | ಕುಸೀದವು | ಕುಸೀದಕವು |
| ೫೦ | ೧೬ | ಕುಸೀದಗಳಲ್ಲಿ | ಕುಸೀದಕಗಳಲ್ಲಿ |
| ೫೧ | ೮ | ಕುಸೀದಗಳಾಗಲಿ | ಕುಸೀದಕಗಳಾಗಲಿ |
| ೫೩ | ೧೬ | ನಾಯನು | ನಾಯಕನು |
| ೫೭ | ೩ (ಕೆಳಗಿನಿಂದ) | ಭೀಳ್ಪಡೆಯಾದ | ಬೀಳ್ಪಡೆಯಾದ |
| ೫೯ | ೨೪ | ಯುಂಕ್‌ತಾಸಿನಲ್ಲಿ | ಯುಕ್ರಾನಿನಲ್ಲಿ |
| ೬೦ | ೪ | ಇಜಿಪ್ಟ್ ದೇಶದ | ಇಜಿಪ್ಟ್ ದೇಶ |
| ೬೨ | ೬ | ಪಟ್ಟಳ | ಪಟ್ಟಣ |
| ೬೨ | ೧೩ | ಹೂಳಿಹೋಗಿ | ಹೂತುಹೋಗಿ |
| ೬೩ | ೨ | ಮುದುಕ | ಮುದಿ |
| ೬೫ | ೯ | ಪೋರ್ಟ್–ಸೈಯದಿನಿಂದ | ಪೋರ್ಟ್‌ಸೈಯದಿನಿಂದ |
| ೬೬ | ೧೧ | ಹೆಂಗರಸನ್ನು | ಹೆಂಗಸರನ್ನು |
| ೬೬ | ೧೩ | ವಾಗುವುದುದೆಂದು | ವಾಗುವುದೆಂದು |
| ೬೬ | ೧೭ | ಇದೊಂದ | ಇದೊಂದು |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೬೭ | ೧೧ | ಸ್ತಕಗಳಲ್ಲಿಯೂ | ಪುಸ್ತಕಗಳಲ್ಲಿಯೂ |
| ೬೮ | ೧೭ | “ನಗರ ರಾಜ” | “ನಗರ ರಾಜ್ಯ” |
| ೭೦ | ೧೧ | ಪಯಣನ್ನು | ಪಯಣವನ್ನು |
| ೭೧ | ೧೩ | ಹಾಕೆಕೊಳ್ಳು | ಹಾಕಿಕೊಳ್ಳು |
| ೭೨ | ಕೊನೆಸಾಲು | ಮಾಡವುದು | ಮಾಡುವುದು |
| ೭೩ | ೩ (ಕೆಳಗಿನಿಂದ) | ಕೂಗುವುರದಿಂದ | ಕೂಗುವುದರಿಂದ |
| ೭೪ | ೯ | ಒಂದಾನೊಂದಾ | ಒಂದಾನೊಂದು |
| ೭೬ | ೧ | ಹುಡಗರಿಗೂ | ಹುಡುಗರಿಗೂ |
| ೭೭ | ೧೯ | ವರ್ಷಗಳ | ವರ್ಗಗಳ |
| ೭೭ | ೨೪ | ಸಂಬಂಧಿಸಿಸ | ಸಂಬಂಧಿಸಿದ |
| ೭೮ | ೧ | ದೇಸದಿಂದ | ದೇಶದಿಂದ |
| ೭೮ | ೬ | ಅಕ್ಕಸಾಲಿಗರೆನ್ನಿಸಿಕೊಳ್ಳುರು | ಅಕ್ಕಸಾಲಿಗರೆನ್ನಿಸಿಕೊಳ್ಳುವರು |
| ೭೮ | ಪ್ರಕರಣಸಂಖ್ಯೆ | ೨೪ | ೨೫ |
| ೭೯ | ೨೨ | ಕಡುಕರು | ಕಟುಕರು |
| ೭೯ | ೨೩ | ದೇವತೆಗಳ | ದೇವತೆಗಳಿಗೆ |
| ೮೦ | ೨೫ | ಅವರಿಗಿ | ಅವರಿಗೆ |
| ೮೦ | ೨೭ | ಉಂಟುಮಾಡುತಿದರು | ಉಂಟುಮಾಡುತ್ತಿದ್ದರು |
| ೮೩ | ೬ (ಕೆಳಗಿನಿಂದ) | ಕಲ್ಲಾದ | ಕಲ್ಲಾಗಿ |
| ೮೪ | ೪ (ಕೆಳಗಿನಿಂದ) | ಮಸೂರಿನಲ್ಲಿ | ಮಸೂರಿಯಲ್ಲಿ |
| ೮೬ | ೨ | ಚಿತ್ರಗು | ಚಿತ್ರಗಳು |
| ೯೨ | ೨೩ | ಪಡೆದದೆ | ಪಡೆದಿದೆ. |
| ೯೪ | ೧೦ | ಅನವು | ಅನುವು |
| ೯೪ | ೧೬ | ವಡೆತನ | ಒಡೆತನ |
| ೯೫ | ೧ | ಗೂಳೆಕಟ್ಟು | ಗುಳೆಕಟ್ಟು |
| ೯೬ | ೧೫ | ವಿಕಾಶ | ವಿಕಾಸ |

# ಮಗಳಿಗೆ ತಂದೆಯ ಓಲೆಗಳು

## ೧

## ಸೃಷ್ಟಿಯ ಪುಸ್ತಕ

ಪ್ರಿಯ ಇಂದಿರಾ,

ನೀನೂ ನಾನೂ ಕೂಡಿರುವಾಗ ನೀನು ನನಗೆ ಆಗಿಂದಾಗ ಅನೇಕ ವಿಷಯಗಳನ್ನು ಕೇಳುತ್ತಿರುವೆ. ನಾನು ಅವುಗಳಿಗೆ ಉತ್ತರ ಕೊಡಲು ಯತ್ನಿಸುತ್ತಿರುವೆನು. ಈಗ ನೀನಿರುವುದು ಮಸೂರಿಯಲ್ಲಿ; ನಾನು ಅಲಹಾಬಾದಿನಲ್ಲಿ. ಆದುದರಿಂದ ನಾವು ಹಾಗೆ ಮಾತಾಡಲಾರೆವು. ಅದಕ್ಕಾಗಿಯೇ ನಾನು ನಿನಗಾಗಿ ನಮ್ಮ ಭೂಮಿ ಮತ್ತು ಅದರಲ್ಲಿ ಉಂಟಾಗಿರುವ ಸಣ್ಣ ದೊಡ್ಡ ದೇಶಗಳ ಕಿರಿಯ ಚರಿತೆಯನ್ನು ಕಾಲ ಕಾಲಕ್ಕೆ ಬರೆಯುತ್ತಿರುವೆನು. ನೀನು ಇಂಗ್ಲಂಡಿನ ಇತಿಹಾಸವನ್ನೂ ಭಾರತದ ಇತಿಹಾಸವನ್ನೂ ಅಲ್ಪ ಸ್ವಲ್ಪ ಓದಿಕೊಂಡಿರುವೆ. ಇಂಗ್ಲಂಡು ಒಂದು ಚಿಕ್ಕ ನಡುಗಡ್ಡೆ. ಭರತಖಂಡ ದೊಡ್ಡ ದೇಶವಾಗಿದ್ದರೂ ಭೂಮಿಯ ಹೊರಮೈಯ ಸಣ್ಣ ಭಾಗವೇ ಸರಿ. ಈ ನಮ್ಮ ಜಗತ್ತಿನ ಚರಿತೆಯ ಬಗೆಗೆ ನಾವು ಏನಾದರೂ ತಿಳಿದುಕೊಳ್ಳಬೇಕಾದರೆ ನಾವು ಹುಟ್ಟಿರುವ ಚಿಕ್ಕ ದೇಶವನ್ನು ಮಾತ್ರವಲ್ಲ, ಉಳಿದೆಲ್ಲ ದೇಶಗಳನ್ನೂ, ಅವುಗಳಲ್ಲಿ ನೆಲೆಗೊಂಡಿರುವ ಎಲ್ಲ ಜನರನ್ನೂ ಯೋಚಿಸಬೇಕಾಗುತ್ತದೆ.

ಈ ಪತ್ರದಲ್ಲಿ ನಾನು ನಿನಗೆ ಸ್ವಲ್ಪವನ್ನು ಮಾತ್ರ ಹೇಳಬಲ್ಲೆ. ಅದು ಸ್ವಲ್ಪವೇ ಆದರೂ ನಿನಗೆ ಮೆಚ್ಚಿಕೆಯಾಗಿ ಈ ಜಗತ್ತನ್ನು ಒಟ್ಟಾಗಿ ನೋಡು ವುದಕ್ಕೂ ಅದರಲ್ಲಿರುವ ಬೇರೆ ಬೇರೆ ಜನರು ನಮ್ಮ ಸಹೋದರ ಸಹೋ ದರಿಯರೆಂದು ತಿಳಿಯುವುದಕ್ಕೂ ನಿನ್ನನ್ನು ತೊಡಗಿಸುವುದೆಂದು ನನ್ನ ನಂಬಿಕೆ. ನೀನು ದೊಡ್ಡವಳಾಗಿ, ಭೂಮಿ ಮತ್ತು ಅದರಲ್ಲಿ ಆಗಿಹೋಗಿ ರುವ ಚರಿತೆಯ ವಿಷಯದಲ್ಲಿ ದೊಡ್ಡದೊಡ್ಡ ಪುಸ್ತಕಗಳನ್ನು ಓದಿಕೊಳ್ಳುವೆ. ಆಗ ಮಿಕ್ಕ ಯಾವ ಕತೆ-ಕಾದಂಬರಿಗಳೂ ನಿನಗೆ ಅಷ್ಟು ಒಗ್ಗಲಾರವು.

ನಮ್ಮ ಭೂಮಿ ಬಹಳೇ ಬಹಳ ಪುರಾತನವಾದುದು–ಕೋಟ್ಯನು ಕೋಟಿ ವರ್ಷಗಳಷ್ಟು ಪ್ರಾಚೀನವಾದುದು–ಎಂಬ ಸಂಗತಿ ನಿನಗೆ ಗೊತ್ತೇ ಇದೆ ಎಷ್ಟೋ ಕಾಲದವರೆಗೆ ಅಲ್ಲಿ ಹೆಂಗಸರಾಗಲಿ ಗಂಡಸರಾಗಲಿ ಇದ್ದಿಲ್ಲ. ಮನುಷ್ಯರು ಕಾಣಿಸಿಕೊಳ್ಳುವುದಕ್ಕಿಂತ ಪೂರ್ವದಲ್ಲಿ ಪಶುಗಳು ಮಾತ್ರ ಇದ್ದುವು. ಈ ಪಶುಗಳಿಗಿಂತ ಮೊದಲು ಯಾವ ತರದ ಪ್ರಾಣಿಯೂ ಭೂಮಿಯ ಮೇಲೆ ಇಲ್ಲದಿರುವ ಕಾಲವೊಂದಿತ್ತು. ಎಲ್ಲ ತರದ ಪ್ರಾಣಿಗಳನ್ನು ಮತ್ತು ಮನುಷ್ಯರನ್ನು ಈಗ ಇಷ್ಟೊಂದು ತುಂಬಿಕೊಂಡಿರುವ ಈ ನಮ್ಮ ಜಗತ್ತು, ಇವೆಲ್ಲವುಗಳಿಲ್ಲದೆ ಹೇಗಿತ್ತೆಂದು ಊಹಿಸುವುದು ಬಹಳ ಕಷ್ಟ. ಆದರೆ ಈ ಭೂಮಿ ಅತಿಶಯ ಉಷ್ಣಮಯವಾಗಿದ್ದು, ಪ್ರಾಣಿಗಳು ಇದರಲ್ಲಿ ಬಾಳಿಕೊಂಡಿರಲು ಅಶಕ್ಯವಾದ ಕಾಲವೊಂದಿತ್ತೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಇಂತಹ ಸಂಗತಿಗಳನ್ನೆ ವಿಶೇಷವಾಗಿ ಅಭ್ಯಾಸ ಮಾಡಿದವರೂ ವಿಚಾರ ಮಾಡಿದವರೂ ಹೀಗೆಯೇ ಹೇಳುತ್ತಾರೆ. ನಾವು ಅವರ ಪುಸ್ತಕಗಳನ್ನೋದಿದರೆ, ಬೆಟ್ಟಗಳು ಮತ್ತು ಫಾಸಿಲ್—ಎಂದರೆ ಪೂರ್ವ ಕಾಲದ ಪ್ರಾಣಿಗಳ ಅವಶೇಷ—ಗಳನ್ನು ಪರಿಶೀಲಿಸಿದರೆ ಇದು ಹೀಗೆಯೇ ಇದ್ದಿರಬಹುದೆಂದು ನಮಗೂ ಎನಿಸುತ್ತದೆ.

ಈಗ ನೀನು ಇತಿಹಾಸವನ್ನು ಪುಸ್ತಕಗಳಲ್ಲಿ ಓದುವೆ. ಆದರೆ ಮನುಷ್ಯರಿಲ್ಲದ ಪೂರ್ವಕಾಲದಲ್ಲಿ ಪುಸ್ತಕಗಳೇ ಬರೆಯಲ್ಪಡುತ್ತಿದ್ದಿಲ್ಲವೆಂಬುದು ಖಂಡಿತ. ಹಾಗಾದರೆ ಆಗ ನಡೆದುದನ್ನು ನಾವು ಕಂಡುಹಿಡಿಯುವುದು ಹೇಗೆ? ಕುಳಿತಲ್ಲಿಯೇ ನಾವು ಎಲ್ಲವನ್ನೂ ಯೋಚಿಸಲಾರೆವು. ನಮಗೆ ಬೇಕಾದ ಹಾಗೆ ನಾವು ಯೋಚಿಸಿ ಒಳ್ಳೇ ಸುಂದರವಾದ ಕಟ್ಟುಕತೆಗಳನ್ನು ಮಾತ್ರ ರಚಿಸಬಲ್ಲೆವು. ಅವು ಒಳ್ಳೇ ಮನೋರಂಜಕವಾಗಿಯೂ ಆಗಬಹುದು. ಆದರೆ ಅವು ನಿಜವಾಗಿರಲಾರವು. ಯಾಕೆಂದರೆ, ನಾವು ಕಣ್ಣಾರೆ ನೋಡಿದ ಸಂಗತಿಗಳನ್ನು ಅವು ಹೊಂದಿಕೊಂಡಿರುವುದಿಲ್ಲ. ಅಂತಹ ಅತಿ ಪ್ರಾಚೀನ ಕಾಲದಲ್ಲಿ ಬರೆದ ಪುಸ್ತಕಗಳು ನಮಗೆ ದೊರೆಯುವುದಿಲ್ಲ. ಆದರೂ ಎಲ್ಲವನ್ನೂ ಒಳ್ಳೆಯ ರೀತಿಯಿಂದ ತಿಳಿಸುವ ಪುಸ್ತಕಗಳಂತೆ, ಅನೇಕ ಸಂಗತಿಗಳನ್ನೊಳಗೊಂಡ ಪದಾರ್ಥಗಳು ಸುದೈವದಿಂದ ನಮಗೆ ದೊರೆಯುತ್ತವೆ. ಬೆಟ್ಟ, ಗುಡ್ಡ, ಸಮುದ್ರ, ಹೊಳೆ, ಚುಕ್ಕೆ, ಕಾಡು ಮತ್ತು ಹಳೆಯ ಪಶುಗಳ ಅವಶೇಷಗಳು ನಮಗೆ ಸಿಗುತ್ತವೆ. ಇವುಗಳಾಗಲಿ

ಇಂತಹ ಇನ್ನುಳಿದ ಪದಾರ್ಥಗಳಾಗಲಿ ಪೃಥ್ವಿಯ ಪ್ರಾಚೀನ ಚರಿತೆಯ ಪುಸ್ತಕಗಳೆನ್ನಬಹುದು. ಈ ಚರಿತೆಯನ್ನು ಅರಿತುಕೊಳ್ಳುವ ನಿಜವಾದ ಮಾರ್ಗವೆಂದರೆ, ಬೇರೆಯವರು ಬರೆದ ಪುಸ್ತಕಗಳನ್ನು ಓದುವುದು ಮಾತ್ರವಲ್ಲ, ಆವರೆ ಪ್ರತ್ಯಕ್ಷ ಸೃಷ್ಟಿಯ ಪುಸ್ತಕದೆಡೆಗೆ ತೆರಳುವುದು ಗುಡ್ಡ ಬೆಟ್ಟಗಳಿಂದ ಈ ಚರಿತೆಯನ್ನು ಹೇಗೆ ಓದಬೇಕೆಂಬುದನ್ನು ನೀನು ಬೇಗನೆ ಕಲಿತುಕೊಳ್ಳುವೆಯೆಂದು ನನ್ನ ಭಾವನೆ. ಅದು ಎಷ್ಟು ಚಿತ್ತಾಕರ್ಷಕ ವಾಗಿರುವುದೆಂಬುದನ್ನು ಯೋಚಿಸು! ದಾರಿಯಲ್ಲಿ ಇಲ್ಲವೆ ಗುಡ್ಡದ ಬದಿಯಲ್ಲಿ ಬಿದ್ದಿರುವ ಪ್ರತಿಯೊಂದು ಸಣ್ಣ ಕಲ್ಲು ಸೃಷ್ಟಿಯ ಪುಸ್ತಕದ ಚಿಕ್ಕ ಓಲೆಯಾಗ ಬಹುದು. ಮತ್ತು ಅದನ್ನು ಹೇಗೆ ಓದಬೇಕೆಂಬುದನ್ನು ನೀನು ಅರಿತು ಕೊಂಡರೆ ಮಾತ್ರ ಅದು ನಿನಗೆ ಏನಾದರೊಂದನ್ನು ತಿಳಿಸಬಹುದು. ಹಿಂದಿ, ಕನ್ನಡ, ಇಂಗ್ಲಿಷು ಅಥವಾ ಯಾವ ಭಾಷೆಯನ್ನು ಓದುವದಾದರೂ ಮೊದಲು ಅದರ ಅಕ್ಷರಗಳನ್ನು ನೀನು ಕಲಿಯುವೆ. ಅದರಂತೆ ಬೆಟ್ಟ ಮತ್ತು ಕಲ್ಲಿನ ಪುಸ್ತಕಗಳಲ್ಲಿ ಸೃಷ್ಟಿಯ ಚರಿತೆಯನ್ನು ಓದುವ ಮೊದಲು ನೀನು ಆ ಸೃಷ್ಟಿಯ ಅಕ್ಷರಗಳನ್ನು ಕಲಿತುಕೊಳ್ಳಬೇಕು. ಇದನ್ನು ಹೇಗೆ ಓದಬೇಕೆಂಬುದು ಈಗಾಗಲೇ ನಿನಗೆ ತುಸು ತಿಳಿದಿರಬಹುದು. ಹೊಳಪಿ ರುವ ದುಂಡಗಾದ ಸಣ್ಣ ಮಿಣ್ಣೆಯನ್ನು ನೀನು ನೋಡಿದರೆ ಅದು ನಿನಗೆ ಏನಾದರೊಂದು ಸಂಗತಿಯನ್ನು ಹೇಳುವುದಿಲ್ಲವೆ? ಮೈತುದಿ ಚೂಪಾ ಗಿಯೂ ಒರಟಾಗಿಯೂ ಇರದೆ, ಆ ಮಿಣ್ಣೆಗಳು ನುಣುಪಾಗಿಯೂ ಗುಂಡ ಗಾಗಿಯೂ ಹೊಳಪುಳ್ಳವಾಗಿಯೂ ಹೇಗಾದುವು? ಒಂದು ದೊಡ್ಡ ಬಂಡೆ ಯನ್ನು ಅನೇಕ ತುಂಡುಗಳಾಗುವಂತೆ ಒಡೆದರೆ, ಅದರ ಪ್ರತಿಯೊಂದು ತುಣುಕು ಒರಟಾಗಿಯೂ, ಕೊನೆಗಳು ಚೂಪಾಗಿಯೂ ಇರುವುವು. ದುಂಡಗಿನ ನುಣ್ಣಗಾದ ಮಿಣ್ಣೆಯಂತೆ ಅದು ಎಂದಿಗೂ ಇರುವುದಿಲ್ಲ. ಇದರ ಕಾರಣವೇನು? ಈ ಒರಟಾದ ಮಿಣ್ಣೆ ಗುಂಡಾಗಿಯೂ ನುಣ್ಣಗೂ ಹೊಳ ಪುಳ್ಳದ್ದೂ ಹೇಗಾಯಿತು? ನೀನು ಕಣ್ಣಿಟ್ಟು ನೋಡಿ ಕಿವಿಗೊಟ್ಟು ಕೇಳಿ ದೆಯಾದರೆ ಅದು ತನ್ನ ಕತೆಯನ್ನು ತಾನೇ ಹೇಳುವುದು ನೀನು ಒಡೆ ದಿರುವ ಆರೆಯ ಒಂದು ತುಂಡು ಚೂಪಾಗಿಯೂ ಒರಟಾಗಿಯೂ ಇಲ್ಲವೆ? ತೀರ ಹಿಂದಿನ ಒಂದಾನೊಂದು ಕಾಲದಲ್ಲಿ ತಾನೂ ಹೀಗೆಯೇ ಇದ್ದುದೆಂದು ಈ ಮಿಣ್ಣೆ ನಿನಗೆ ತಿಳಿಸುತ್ತದೆ. ಆಗ ಅದು ಗುಡ್ಡದ ಒಂದು ಪಕ್ಕದಲ್ಲಿದ್ದಿರ

ಬಹುದು. ಮಳೆಯಿಂದ ಅದು ಕೊಚ್ಚಿಕೊಂಡು ಹೋಗಿ ಗುಡ್ಡಗಳ ನಡುವಿನ ದರಿಯಲ್ಲಿ ಹರಿಯುತ್ತಿರುವ ಒಂದು ಹಳ್ಳಕ್ಕೆ ಕೂಡಿರಬಹುದು. ಆ ಹಳ್ಳದಿಂದ ಮುಂದುಮುಂದಕ್ಕೆ ಹೋಗಿ ಚಿಕ್ಕ ಹೊಳೆಯಲ್ಲಿ ಸೇರಿರಬಹುದು. ಅಲ್ಲಿಂದ ದೊಡ್ಡ ಹೊಳೆಗೆ ಹರಿದು ಹೋಗಿರಬಹುದು. ಇಷ್ಟೆಲ್ಲ ಹೊತ್ತಿನ ವರೆಗೆ ಹೊಳೆಯ ಬುಡದಲ್ಲಿ ಉರುಳುತ್ತ ಉರುಳುತ್ತ ನಡೆದಿರುವಾಗ ಅದರ ಕೊನೆಗಳು ಸವೆದು ಒರಟಾದ ಮೈಯ್ಯು ನುಣ್ಣಗಾಗಿ ಹೊಳಪುಳ್ಳದ್ದಾಯಿತು. ಹೀಗೆ ಅದು ಈಗ ನಿನ್ನ ಕಣ್ಣಿಗೆ ಬೀಳುವ ಮಿಣ್ಣೆಯಾಯಿತು; ಆದರೆ ನದಿಯಿಂದ ಹೇಗೋ ಹೊರಗಾಗಿ ನಿನ್ನ ಕಣ್ಣಿಗೆ ಬಿತ್ತು. ಆ ನದಿಯ ಹರಿ ಅದನ್ನು ಇನ್ನೂ ಮುಂದಕ್ಕೆ ಒಯ್ದಿದ್ದರೆ ಅದು ಇನ್ನಷ್ಟು ಸವೆದು ಕಟ್ಟಕಡೆಗೆ ಉಸುಕಿನ ಸಣ್ಣ ಕಣವಾಗುತ್ತಿತ್ತು. ಮತ್ತು ಕಡಲ ದಂಡೆಯ ಸೌಂದರ್ಯವನ್ನು ಹೆಚ್ಚಿಸಲು, ತನ್ನಂತಿರುವ ಇತರ ಉಸುಕಿನ ಕಣಗಳಲ್ಲಿ ಸೇರಿಕೊಳ್ಳುತ್ತಿತ್ತು. ಚಿಕ್ಕ ಮಕ್ಕಳು ಮನೆ ಕಟ್ಟಿ ಆಟವಾಡುವುದು ಇಲ್ಲಿಯೆ ಅಲ್ಲವೆ ?

ಒಂದು ಸಣ್ಣ ಮಿಣ್ಣೆ ನಿನಗೆ ಇಷ್ಟೊಂದು ತಿಳಿಸುವುದು. ಹಾಗಿದ್ದರೆ ನಾವು ನಮ್ಮ ಸುತ್ತುಮುತ್ತು ನೋಡುತ್ತಿರುವ ಗುಡ್ಡಗಳು, ಬೆಟ್ಟಗಳು ಮತ್ತು ಇನ್ನುಳಿದ ಪದಾರ್ಥಗಳು ನಮಗೆ ಇನ್ನೆಷ್ಟು ಹೆಚ್ಚಿನ ಸಂಗತಿಗಳನ್ನು ತಿಳಿಸಲಿಕ್ಕಿಲ್ಲ ?

---

## ೨

# ಪ್ರಾಚೀನ ಕಾಲದ ಇತಿಹಾಸ ಹೇಗೆ ಬರೆಯಲ್ಪಟ್ಟಿತು ?

ನಾನು ನಿನಗೆ ಬರೆದ ನಿನ್ನೆಯ ಪತ್ರದಲ್ಲಿ, ಸೃಷ್ಟಿಯ ಪುಸ್ತಕದಿಂದ ಭೂಮಿಯ ಪ್ರಾಚೀನ ಚರಿತೆಯನ್ನು ಹೇಗೆ ತಿಳಿದುಕೊಳ್ಳಬೇಕೆಂಬುದನ್ನು ತಿಳಿಸಿದೆನು. ಈ ಪುಸ್ತಕ, ನಾವು ನಮ್ಮ ಸುತ್ತುಮುತ್ತು ನೋಡುತ್ತಿರುವ ಪ್ರತಿಯೊಂದು ಪದಾರ್ಥ–ಬೆಟ್ಟ, ಗುಡ್ಡ, ದರಿ, ಹೊಳೆ, ಸಮುದ್ರ ಮತ್ತು ಜ್ವಾಲಾಮುಖಿಯ ಪರ್ವತಗಳಿಂದ ಕಂಗೊಳಿಸುತ್ತದೆ. ಈ ಪುಸ್ತಕ

ಯಾವಾಗಲೂ ತೆರೆದಿರುತ್ತದೆ. ಆದರೆ ಅತ್ತ ಲಕ್ಷ್ಯಕೊಡುವವರಾಗಲಿ ಅದನ್ನು ಓದಲು ಹವಣಿಸುವವರಾಗಲಿ ಎಷ್ಟು ಜನ ? ಈ ಪುಸ್ತಕವನ್ನು ಓದಿ ತಿಳಿಯಬಲ್ಲೆವಾದರೆ ಅದು ನಮಗೆ ಎಂತಹ ಮನೋರಂಜಕವಾದ ಕತೆಯನ್ನು ಹೇಳಬಲ್ಲುದು ! ನಾವು ಅಲ್ಲಿನ ಪುಸ್ತಕಗಳಲ್ಲಿ ಓದಿಕೊಳ್ಳುವ ಈ ಕತೆಗಳು, ಕಟ್ಟು ಕತೆಗಳಿಗಿಂತ ಹೆಚ್ಚು ಮನೋರಂಜಕವಾಗಿರುವುವು.

ಯಾವ ಕಾಲದಲ್ಲಿ ಈ ನಮ್ಮ ಭೂಮಿಯ ಮೇಲೆ ಮನುಷ್ಯನು ಮತ್ತು ಪಶುಗಳು ಬದುಕಿ ಬಾಳುತ್ತಿರಲಿಲ್ಲವೋ ಅಂತಹ ತೀರ ಹಿಂದಿನ ಕಾಲದ ಸಂಗತಿಗಳನ್ನು ಈ ಸೃಷ್ಟಿಯ ಪುಸ್ತಕದಿಂದ ನಾವು ಕಲಿಯಬಲ್ಲೆವು. ನಾವು ಅದನ್ನು ಓದುತ್ತ ಹೋದಂತೆ ನಮಗೆ ತಿಳಿದುಬರುವುದೇನೆಂದರೆ:—ಮೊಟ್ಟ ಮೊದಲಿನ ತರಹದ ಪಶುಗಳೂ ಆಮೇಲೆ ಅನೇಕ ಪಶುಗಳೂ ಕಾಣಿಸಿ ಕೊಳ್ಳುವುವು. ಆಮೇಲೆ ಬರುವವರು ಮನುಷ್ಯರು-ಗಂಡಸರು ಮತ್ತು ಹೆಂಗಸರು. ಆದರೆ ಆ ಕಾಲದ ಮನುಷ್ಯರು ನಾವು ಈಗ ನೋಡುತ್ತಿರುವ ಮನುಷ್ಯರಿಗಿಂತ ತೀರ ಬೇರೆ ತರದವರು. ಅವರು ಕಾಡು ಮನುಷ್ಯರು-ಪಶುಗಳಿಗಿಂತ ಬಹಳ ಭಿನ್ನರಲ್ಲದವರು. ಮೆಲ್ಲ-ಮೆಲ್ಲನೆ ಅವರು ಅನುಭವ ಪಡೆದು ವಿಚಾರ ಮಾಡತೊಡಗುವರು. ಈ ವಿಚಾರ-ಶಕ್ತಿಯೆ ಅವರನ್ನು ಪಶುಗಳಿಂದ ಬೇರ್ಪಡಿಸುವುದು. ಈ ವಿಚಾರ-ಶಕ್ತಿಯೆ ಅವರನ್ನು ಬಹಳ ದೊಡ್ಡ ಮತ್ತು ಅತಿ ಭಯಂಕರ ಪಶುಗಳಿಗಿಂತ ಬಲಿಷ್ಠರನ್ನಾಗಿ ಮಾಡು ವುದು. ಒಬ್ಬ ಚಿಕ್ಕ ಮನುಷ್ಯನು ಬಹಳ ದೊಡ್ಡದಾದ ಆನೆಯ ಮೇಲೆ ಕುಳಿತು ತನ್ನ ಮನಬಂದಂತೆ ಅದನ್ನು ಕೆಲಸದಲ್ಲಿ ತೊಡಗಿಸುವುದನ್ನು ನೀನು ಈಗ ನೋಡುತ್ತಿರುವೆ. ಆನೆ ಬಹು ದೊಡ್ಡದಾದ ಬಲಿಷ್ಠವಾದ ಪ್ರಾಣಿ. ತನ್ನ ಮೇಲೆ ಕುಳಿತಿರುವ ಮಾವುತನಿಗಿಂತ ಅದು ಎಷ್ಟೋ ಬಲ ವುಳ್ಳದ್ದು. ಆದರೆ ಮಾವುತನಿಗೆ ಯೋಚನಾಶಕ್ತಿ ಇದೆ. ಮನುಷ್ಯನು ಆನೆಯ ಒಡೆಯನಾಗಿರುವುದೂ ಆನೆ ಅವನ ಆಳಾಗಿರುವುದೂ ಇದರಿಂದಲೇ. ಹೀಗೆ ಮನುಷ್ಯನಲ್ಲಿ ವಿಚಾರ-ಶಕ್ತಿ ಬೆಳೆದಂತೆ ಅವನು ಹೆಚ್ಚು ಜಾಣನಾಗ ತೊಡಗಿದನು; ಅವನ ಬುದ್ಧಿ ಹೆಚ್ಚು ಚುರುಕಾಯಿತು. ಅವನು ಅನೇಕ ವಿಷಯಗಳನ್ನು, ಎಂದರೆ ಬೆಂಕಿ ಹೊತ್ತಿಸುವುದು, ಉತ್ತು ಬೆಳೆಯುವುದು, ನೇಯುವುದು, ಮನೆಕಟ್ಟುವುದು ಮೊದಲಾದುವುಗಳನ್ನು ಕಂಡುಹಿಡಿದನು. ಎಷ್ಟೋ ಗಂಡಸರೂ ಹೆಂಗಸರೂ ಕೂಡಿ ಇರತೊಡಗಿದರು. ಮೊಟ್ಟ-

ಮೊದಲು ಊರುಗಳಾದುದು ಹೀಗೆ. ಊರುಗಳಾಗುವ ಮೊದಲು ಮನು ಷ್ಯರು ಪ್ರಾಯಶಃ ಅಲೆದಾಡುತ್ತಿದ್ದರು; ಮತ್ತು ಒಂದು ತರದ ಗುಡಾರದ ಮನೆಗಳಲ್ಲಿ ವಾಸಿಸುತ್ತಿದ್ದರು. ಆಗ ಅವರಿಗೆ ಭೂಮಿಯಿಂದ ಧಾನ್ಯವನ್ನು ಹೇಗೆ ಬೆಳೆಯಬೇಕೆಂದು ಗೊತ್ತಿರಲಿಲ್ಲ. ಆದುದರಿಂದ ಅವರಲ್ಲಿ ಅಕ್ಕಿಯೂ ಇರಲಿಲ್ಲ; ರೊಟ್ಟಿ ಮಾಡಲು ಬೇಕಾದ ಜೋಳವೂ ಇರಲಿಲ್ಲ. ಕಾಯಿ ಪಲ್ಲೆಯೂ ಈಗ ನೀನು ಉಣ್ಣುವ ಅನೇಕ ಪದಾರ್ಥಗಳೂ ಅವರಿಗೆ ತಿಳಿ ದಿರಲಿಲ್ಲ. ಕೆಲವು ಕಾಡುಗಡ್ಡೆಗಳು ಮತ್ತು ಹಣ್ಣು ಹಂಪಲುಗಳು ಸಿಗು ತ್ತಿದ್ದು ಅವರು ಅವುಗಳನ್ನೇ ತಿನ್ನುತ್ತಿದ್ದಿರಬಹುದು. ಬಹಳವಾದಿ, ತಾವು ಬೇಟೆಯಾಡಿ ತಂದ ಪಶುಗಳಿಂದಲೇ ಅವರು ಜೀವಿಸುತ್ತಿದ್ದಿರಬಹುದು.

ಊರು ಮತ್ತು ಪಟ್ಟಣಗಳು ಬೆಳೆದಂತೆ ಜನರು ಸೊಗಸಾದ ಕೈಗಾರಿಕೆ ಗಳನ್ನು ಕಲಿತುಕೊಂಡರು. ಬರೆಯುವುದನ್ನೂ ಕಲಿತರು. ಆದರೆ ಬಹಳ ಕಾಲದವರೆಗೆ ಬರೆಯಲು ಕಾಗದವಿರಲಿಲ್ಲ. ಜನರು ಭೂರ್ಜಪತ್ರ ಇಲ್ಲವೆ ತಾಡವೋಲೆಗಳ ಮೇಲೆ ಬರೆಯುತ್ತಿದ್ದರು. ಬಹಳ ಹಿಂದಿನದಾದ ಆಗಿನ ಕಾಲದಲ್ಲಿ ತಾಡವೋಲೆಗಳ ಮೇಲೆ ಸಂಪೂರ್ಣವಾಗಿ ಬರೆದ ಪುಸ್ತಕಗಳನ್ನು ಹಲ-ಕೆಲವು ಪುಸ್ತಕಾಲಯಗಳಲ್ಲಿ ಇಂದಿಗೂ ನೀನು ನೋಡಬಹುದು. ಆಮೇಲೆ ಹಾಳೆ ಬಳಕೆಗೆ ಬಂದು ಬರೆಯಲು ಸುಲಭವಾಯಿತು. ಆದರೆ ಅಚ್ಚು-ಮನೆ ( Printing Press ) ಗಳಿಲ್ಲದುದರಿಂದ ಈಗಿನಂತೆ ಸಾವಿರಾರು ಪುಸ್ತಕಗಳನ್ನು ಅಚ್ಚುಹಾಕಲು ಆಗುತ್ತಿರಲಿಲ್ಲ. ಒಂದು ಸಲ ಒಂದು ಪುಸ್ತಕವನ್ನು ಮಾತ್ರ ಬರೆಯಬಹುದಾಗಿತ್ತು. ಆಮೇಲೆ ಕೈಯಿಂದ ಬಹಳ ಕಷ್ಟಪಟ್ಟು ಅದರ ಪ್ರತಿಗಳನ್ನು ತೆಗೆಯಬೇಕಾಗಿದ್ದಿತು. ಆದುದ ರಿಂದ ಪುಸ್ತಕಗಳು ವೆಗ್ಗಳವಾಗಿರುವುದು ಸಾಧ್ಯವಿರಲಿಲ್ಲ. ಪುಸ್ತಕಗಳನ್ನು ಮಾರುವವನಲ್ಲಿ ಇಲ್ಲವೆ ಪುಸ್ತಕಗಳ ಅಂಗಡಿಗಳಿಗೆ ಹೋಗಿ ಪುಸ್ತಕವನ್ನು ಕೊಂಡುಕೊಳ್ಳುವುದು ನಿನಗೆ ಶಕ್ಯವಿರಲಿಲ್ಲ. ಅದರ ಪ್ರತಿಯನ್ನು ಮಾಡಿಸಿ ಕೊಳ್ಳಲು ಬಹಳ ಕಾಲ ಬೇಕಾಗುತ್ತಿತ್ತು. ಆದರೆ ಆಗಿನ ಕಾಲದಲ್ಲಿ ಜನರು ಬಹಳ ಮುದ್ದಾಗಿ ಬರೆಯುತ್ತಿದ್ದರು. ನಮ್ಮ ಪುಸ್ತಕಾಲಯದಲ್ಲಿ ಸುಂದರ ವಾದ ಕೈಬರೆಹದ ಅನೇಕ ಹೊತ್ತಗೆಗಳು ಈಗ ನಮಗೆ ದೊರೆಯುತ್ತವೆ. ಸಂಸ್ಕೃತ, ಪಾರಸಿ, ಹಿಂದಿ ಮತ್ತು ಕನ್ನಡ ಕೈಬರಹದ ಹೊತ್ತಗೆಗಳು ಹಿಂದು ಸ್ಥಾನದಲ್ಲಿವೆ. ಪುಸ್ತಕವನ್ನು ಪ್ರತಿಮಾಡಿದವನು ಹಲವು ಸಲ ಓಲೆಯ

ಇಕ್ಕೆಲದಲ್ಲಿಯೂ ಹೂಗಳನ್ನೂ ಚಿತ್ರಗಳನ್ನೂ ತೆಗೆದಿರುವನು.

ಊರುಗಳು ಬೆಳೆದಂತೆಲ್ಲ ದೇಶಗಳೂ ರಾಷ್ಟ್ರಗಳೂ ರೂಪುಗೊಂಡವು. ದೇಶದಲ್ಲಿ ಒಬ್ಬರಿಗೊಬ್ಬರು ನೆರೆ-ಹೊರೆಯಾಗಿ ಜನರು ಇರತೊಡಗಿದುದರಿಂದ ಒಬ್ಬರಿಗೊಬ್ಬರ ಗುರುತು ತಾನಾಗಿಯೇ ಆಯಿತು. ಬೇರೆ ದೇಶಗಳ ಜನರಿಗಿಂತ ತಾವು ಹೆಚ್ಚಿನವರೆಂದು ಅವರು ತಿಳಿದುಕೊಂಡರು. ಮತ್ತು ಬುದ್ಧಿಗೇಡಿಗಳಾಗಿ ಅವರೊಂದಿಗೆ ಕಾದಾಡತೊಡಗಿದರು. ಕಾದಾಡುವುದು, ಒಬ್ಬರನ್ನೊಬ್ಬರು ಕೊಲ್ಲುವುದು ತೀರ ತಿಳಿಗೇಡಿತನದ ಕೆಲಸವೆಂದು ಆಗಿನವರು ತಿಳಿದಿರಲಿಲ್ಲ; ಇಂದಿಗೂ ತಿಳಿದುಕೊಳ್ಳಲೊಲ್ಲರು. ಇದರಿಂದ ಯಾರಿಗೂ ಒಳ್ಳೆಯುದಾಗುವುದಿಲ್ಲ.

ಈ ಊರು ಮತ್ತು ದೇಶಗಳ ಚರಿತ್ರೆಯನ್ನು ತಿಳಿದುಕೊಳ್ಳುವುದಕ್ಕಾಗಿ ನಾವು ಹಳೆಯ ಪುಸ್ತಕಗಳ ನೆರವನ್ನು ಪಡೆಯಬೇಕಾಗುತ್ತದೆ. ಆದರೆ ಇಂತಹ ಹೊತ್ತಗೆಗಳು ಬಹಳ ದೊರೆಯುವುದಿಲ್ಲ. ನಮಗೆ ನೆರವಾಗುವ ಬೇರೆ ಬೇರೆ ಒಡವೆಗಳಿವೆ. ಹಿಂದಿನ ಕಾಲದ ಅರಸರು ಮತ್ತು ಸಾಮ್ರಾಟರು ತಮ್ಮ ಆಳಿಕೆಯ ಕಾಲದಲ್ಲಿ ನಡೆದ ಸಂಗತಿಗಳನ್ನು ಕಲ್ಲಿನ ಕಂಬಗಳ ಮೇಲೆ ಇಲ್ಲವೆ ಇಟ್ಟಂಗಿಗಳ ಮೇಲೆ ಬರೆಯಿಸುತ್ತಿದ್ದರು. ಪುಸ್ತಕಗಳು ಬಹಳ ಕಾಲ ಬಾಳುವುದಿಲ್ಲ. ಅವುಗಳ ಕಾಗದಗಳು ಹುಳುತುಹೋಗುತ್ತವೆ. ಆದರೆ ಕಲ್ಲುಗಳು ಬಹಳ ಕಾಲದವರೆಗೆ ಬಾಳುತ್ತವೆ. ಅಲಹಾಬಾದಿನ ಕೋಟೆಯಲ್ಲಿ ಅಶೋಕನ ದೊಡ್ಡ ಕಲ್ಲಿನ ಕಂಬವನ್ನು ನೋಡಿದ್ದುದು ನಿನಗೆ ನೆನಪಿರಬಹುದು. ಅಶೋಕನು ನೂರಾರು ವರುಷಗಳ ಹಿಂದೆ ಹಿಂದುಸ್ಥಾನದ ದೊಡ್ಡ ಅರಸನಾಗಿದ್ದನು. ಅವನು ಇಂತಹ ಕಂಬಗಳ ಮೇಲೆ ತನ್ನ ಶಾಸನಗಳನ್ನು ಕೊರೆಯಿಸಿ ಸಾರಿರುವನು. ನೀನು ಲಖನೌ ಪಟ್ಟಣದಲ್ಲಿಯ ಪುರಾತನ ವಸ್ತು-ಸಂಗ್ರಹಾಲಯಕ್ಕೆ ಹೋದರೆ ಅಕ್ಷರಗಳನ್ನು ಕೆತ್ತಿದ ಹಲವು ಇಟ್ಟಂಗಿಗಳು ನಿನ್ನ ಕಣ್ಣಿಗೆ ಬೀಳುವುವು.

ಬೇರೆ ಬೇರೆ ದೇಶಗಳ ಪ್ರಾಚೀನ ಇತಿಹಾಸವನ್ನು ನಾವು ಅಭ್ಯಾಸ ಮಾಡುವಾಗ, ಬಹಳ ಹಿಂದಿನ ಕಾಲದಲ್ಲಿ ಚೀನ ಮತ್ತು ಈಜಿಪ್ತ ದೇಶಗಳಲ್ಲಿ ಅಲ್ಲಿಯ ಜನರು ದೊಡ್ಡ ದೊಡ್ಡ ಕೆಲಸಗಳನ್ನು ಮಾಡಿರುವುದು ನಮಗೆ ಗೊತ್ತಾಗುತ್ತದೆ. ಆಗ ಯುರೋಪಿನ ದೇಶಗಳು ಇನ್ನೂ ಕಾಡು

ಜನರಿಂದ ತುಂಬಿದ್ದವು. ರಾಮಾಯಣ ಮಹಾಭಾರತಗಳನ್ನು ಬರೆದ ಕಾಲದಲ್ಲಿ ಹಿಂದುಸ್ಥಾನದ ವೈಭವದ ದಿನಗಳ ಸಂಗತಿಗಳೂ ನಮಗೆ ಗೊತ್ತಾಗುತ್ತವೆ. ಆಗಿನ ಕಾಲದಲ್ಲಿ ನಮ್ಮ ಹಿಂದುಸ್ಥಾನ ಬಲಿಷ್ಠವಾಗಿಯೂ ಸಿರಿಯುಳ್ಳದ್ದಾಗಿಯೂ ಇದ್ದಿತು. ಇಂದು ಅದು ತೀರ ಬಡತನಕ್ಕೆ ಈಡಾಗಿದೆ; ಮತ್ತು ಪರಕೀಯರ ಆಳಿಕೆಗೆ ಒಳಪಟ್ಟಿದೆ. ನಮ್ಮ ದೇಶದಲ್ಲಿಯೆ ನಮಗೆ ಸ್ವಾತಂತ್ರ್ಯವಿಲ್ಲ. ಅದರಿಂದ ನಮಗೆ ಬೇಕಾದುದನ್ನು ನಾವು ಮಾಡಲಾರೆವು. ಆದರೆ ಈ ಸ್ಥಿತಿ ಹಿಂದಿನಿಂದಲೂ ಇರಲಿಲ್ಲ. ನಾವು ಯತ್ನ ಮಾಡಿದರೆ ನಮ್ಮ ದೇಶವನ್ನು ನಾವು ಸ್ವತಂತ್ರವಾಗಿ ಮಾಡಬಲ್ಲೆವು. ಅದರಿಂದ ನಮ್ಮ ಬಡಜನರೆಲ್ಲರನ್ನೂ ಒಳ್ಳೆಯ ಸ್ಥಿತಿಗೆ ತರಬಹುದು. ಯುರೋಪಿನ ಸುಖಮಯವಾದ ಕೆಲವು ದೇಶಗಳಂತೆ ನಮ್ಮ ಭರತ ಭೂಮಿಯೂ ಆಗಬಹುದು.

ಭೂಮಿಯ ಮನೋಹರವಾದ ಚರಿತೆಯನ್ನು ಮೊದಲಿನಿಂದ ನನ್ನ ಮುಂದಿನ ಓಲೆಯಲ್ಲಿ ಬರೆಯತೊಡಗುವೆನು.

---

## ೩
## ಭೂಮಿಯ ರಚನೆ

ಭೂಮಿ ಸೂರ್ಯನ ಸುತ್ತಲೂ ಚಂದ್ರನು ಭೂಮಿಯ ಸುತ್ತಲೂ ತಿರುಗುತ್ತಿರುವುದನ್ನು ನೀನು ಬಲ್ಲೆ. ಭೂಮಿಯಂತೆ ಇನ್ನೂ ಅನೇಕ ವಸ್ತುಗಳು ಸೂರ್ಯನನ್ನು ಸುತ್ತುತ್ತಿರುವುದೂ ನಿನಗೆ ಗೊತ್ತಿದೆ. ನಮ್ಮ ಭೂಮಿಯನ್ನೊಳಗೊಂಡ ಇವೆಲ್ಲ ವಸ್ತುಗಳಿಗೆ ಸೂರ್ಯನ ಗ್ರಹಗಳೆನ್ನುತ್ತಾರೆ. ಚಂದ್ರ-ಬಿಂಬ ಭೂಮಿಯ ಉಪ-ಗ್ರಹ ( Satellite ) ವೆಂದೆನಿಸಿಕೊಳ್ಳುವುದು. ಯಾಕೆಂದರೆ ಅದರ ಸುತ್ತಾಟ ಪೃಥ್ವಿಯನ್ನೇ ಅವಲಂಬಿಸಿಕೊಂಡಿರುವುದು. ಉಳಿದ ಗ್ರಹಗಳಿಗೂ ಅವುಗಳ ಉಪ-ಗ್ರಹಗಳುಂಟು. ಸೂರ್ಯನೂ ಗ್ರಹಗಳೂ ತಮ್ಮ ತಮ್ಮ ಉಪ-ಗ್ರಹಗಳೊಂದಿಗೆ ಅದೊಂದು ಸೊಗಸಾದ ಕುಟುಂಬದಂತಿರುವುದು. ಇದಕ್ಕೆ ಸೂರ್ಯ-ಮಾಲಿಕೆ—ಸೌರ ವ್ಯೂಹವೆಂದು ಹೆಸರು. ಸೂರ್ಯನು ಎಲ್ಲ ಗ್ರಹಗಳಿಗೆ ತಂದೆಯಂತಿರು

ವುದರಿಂದ ಇವೆಲ್ಲವುಗಳಿಗೆ ಸೂರ್ಯ-ಮಾಲಿಕೆಯೆನ್ನುವರು.

ರಾತ್ರಿಯಲ್ಲಿ ನಿನಗೆ ಸಾವಿರಾರು ಚುಕ್ಕೆಗಳು ಕಾಣುತ್ತವೆ. ಅವುಗಳಲ್ಲಿ ಕೆಲವು ಮಾತ್ರ ಗ್ರಹಗಳು. ಇವುಗಳು ನಕ್ಷತ್ರಗಳೆನ್ನಿಸಿಕೊಳ್ಳುವುದೇ ಇಲ್ಲ. ನಕ್ಷತ್ರ ಮತ್ತು ಗ್ರಹಗಳಲ್ಲಿ ಇರುವ ಭೇದವನ್ನು ನೀನು ತಿಳಿದುಕೊಳ್ಳ ಬಲ್ಲೆಯಾ? ನಕ್ಷತ್ರಗಳೊಡನೆ ಹೋಲಿಸಿದರೆ ಗ್ರಹಗಳು ನಮ್ಮ ಭೂಮಿ ಯಂತೆ ತೀರ ಚಿಕ್ಕವಾಗಿರುವವು. ಆದರೆ ಅವು ನಮಗೆ ಅತಿ ಹತ್ತಿರದಲ್ಲಿ ಇರುವುದರಿಂದ ಆಕಾಶದಲ್ಲಿ ದೊಡ್ಡವಾಗಿ ಕಾಣಿಸುತ್ತವೆ. ಚಂದ್ರನು ಮಗುವಿನಂತಿದ್ದು ಹೇಗೆ ದೊಡ್ಡವನಾಗಿ ಕಾಣುತ್ತಾನೆ ನೋಡು. ಯಾಕೆಂ ದರೆ ಅವನಿರುವುದು ನಮಗೆ ತೀರ ಹತ್ತಿರದಲ್ಲಿ. ಚುಕ್ಕೆ ಮತ್ತು ಗ್ರಹಗಳನ್ನು ಗುರುತಿಸುವ ನಿಜವಾದ ಮಾರ್ಗವೆಂದರೆ ಅವು ಮಿನುಗುತ್ತವೆಯೊ ಇಲ್ಲವೊ ಕಂಡುಕೊಳ್ಳುವುದು. ನಕ್ಷತ್ರಗಳು ಮಿನುಗುತ್ತವೆ. ಗ್ರಹಗಳು ಮಿನುಗುವು- ದಿಲ್ಲ. ಗ್ರಹಗಳು ಹೊಳೆಯುವುದು ಸೂರ್ಯನ ಬೆಳಕಿನಿಂದ. ಗ್ರಹಗಳಲ್ಲಿ ಇಲ್ಲವೆ ಚಂದ್ರನಲ್ಲಿ ನಾವು ಕಾಣುವ ಹೊಳಪು ಸೂರ್ಯನ ಬೆಳಕು ಮಾತ್ರ. ನಿಜವಾದ ನಕ್ಷತ್ರಗಳಿರುವುದು ನಮ್ಮ ಸೂರ್ಯನಂತೆ. ಅವು ತಮ್ಮಿಂದ ತಾವೇ ಹೊಳೆಯುತ್ತವೆ. ಯಾಕೆಂದರೆ ಅವು ನಿಗಿನಿಗಿ ಕೆಂಡದಂತೆ ಸುಡು- ತ್ತಿರುವವು. ನಿಜವಾಗಿ ನೋಡಿದರೆ ನಮ್ಮ ಸೂರ್ಯನೂ ಒಂದು ಚುಕ್ಕೆಯೇ. ಅವನು ನಮಗೆ ತೀರ ಸಮೀಪದಲ್ಲಿರುವುದರಿಂದ ದೊಡ್ಡವನಾಗಿ ಕೆಂಡದ ಚೆಂಡಿನಂತೆ ಕಾಣುತ್ತಾನೆ.

ಹೀಗೆ ನಮ್ಮ ಭೂಮಿ ಸೂರ್ಯನ ಕುಟುಂಬಕ್ಕೆ, ಎಂದರೆ, ಸೂರ್ಯ- ಮಾಲೆಗೆ ಸಂಬಂಧಿಸಿರುವುದು. ಭೂಮಿ ಬಹಳ ದೊಡ್ಡದಾಗಿದೆಯೆಂದು ನಾವು ತಿಳಿದುಕೊಂಡಿದ್ದೇವೆ. ಅಲ್ಪರಾದ ನಮಗಿಂತಲೂ ಅದು ದೊಡ್ಡದು. ಬಹಳ ವೇಗದಿಂದ ಓಡುವ ಉಗೆಬಂಡಿ ಅಥವಾ ಉಗೆಹಡಗಿನ ಮೂಲಕ ಭೂಮಿಯ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಲು ಎಷ್ಟೋ ವಾರಗಳೂ ತಿಂಗಳುಗಳೂ ಬೇಕಾಗುತ್ತವೆ. ನಮಗೆ ದೊಡ್ಡದಾಗಿ ಕಂಡರೂ ಅದು ಗಾಳಿಯಲ್ಲಿ ಕಂಡುಬರುವ ಧೂಳಿಯ ಒಂದು ಕಣದಂತೆ ಇದೆ. ಸೂರ್ಯನು ಎಷ್ಟೋ ಕೋಟಿ ಮೈಲು ದೂರದಲ್ಲಿರುವನು. ಉಳಿದ ಚುಕ್ಕೆ ಗಳು ಅವನಿಂತ ಬಹಳ ದೂರದಲ್ಲಿರುವುವು.

ಚುಕ್ಕೆಗಳ ವಿಷಯವನ್ನು ಅಭ್ಯಾಸ ಮಾಡುವ ಜನರಿಗೆ ಖಗೋಲ

ಶಾಸ್ತ್ರಜ್ಞರೆಂದು ಹೆಸರು. ಭೂಮಿ ಮತ್ತು ಎಲ್ಲ ಗ್ರಹಗಳು ಒಂದಾನೊಂದು ಕಾಲದಲ್ಲಿ ಸೂರ್ಯನ ಅಂಗಗಳಾಗಿದ್ದುವೆಂದು ಅವರು ನಮಗೆ ಹೇಳುತ್ತಾರೆ. ಸೂರ್ಯನು ಈಗಿನಂತೆ ಆಗಲೂ ಭಯಂಕರವಾದ ಉರಿಯ ರಾಶಿಯೇ ಆಗಿದ್ದನು. ಏನೋ ಒಂದು ಕಾರಣದಿಂದ ಸೂರ್ಯನ ಕೆಲವು ಸಣ್ಣ ಭಾಗಗಳು ಸಡಿಲಾಗಿ ಗಾಳಿಯಲ್ಲಿ ಸಿಡಿದುಬಿದ್ದುವು. ಆದರೆ ತಮ್ಮ ತಂದೆಯಾದ ಸೂರ್ಯನಿಂದ ಅವು ಸಂಪೂರ್ಣವಾಗಿ ಬಿಡುಗಡೆ ಹೊಂದಲಿಲ್ಲ. ಅವುಗಳಿಗೆ ಹಗ್ಗವನ್ನು ಕಟ್ಟಿದಂತಾಗಿ ಸೂರ್ಯನ ಸುತ್ತಲೂ ಗರಗರನೆ ತಿರುಗುತ್ತಿರುವುವು. ನಾವು ಹಗ್ಗಕ್ಕೆ ಹೋಲಿಸಿರುವ ಈ ಶಕ್ತಿ ಬಹು ಅಗಾಧವಾದದ್ದು. ಅದು ಸಣ್ಣ ವಸ್ತುಗಳನ್ನು ದೊಡ್ಡ ವಸ್ತುಗಳ ಕಡೆಗೆ ಸೆಳೆಯುತ್ತದೆ. ಪದಾರ್ಥಗಳು ಕೆಳಗೆ ಬೀಳುವುದು ಇದೇ ಶಕ್ತಿಯಿಂದ. ನಮಗೆ ಹತ್ತಿರದಲ್ಲಿರುವ ಅತಿ ದೊಡ್ಡ ವಸ್ತು ಭೂಮಿಯೇ ಆಗಿರುವುದರಿಂದ ಅದು ನಮ್ಮಲ್ಲಿಯ ಪ್ರತಿಯೊಂದು ಪದಾರ್ಥವನ್ನು ಸೆಳೆದುಕೊಳ್ಳುತ್ತದೆ.

ಹೀಗೆ ನಮ್ಮ ಭೂಮಿಯೂ ಸೂರ್ಯನಿಂದ ಸಿಡಿದು ಹೊರಬಿದ್ದುದೇ. ಭಯಂಕರವಾದ ಉಗೆಯಿಂದಲೂ ಸುತ್ತುಮುತ್ತು ವ್ಯಾಪಿಸಿರುವ ಗಾಳಿಯಿಂದಲೂ ಮೊದಲು ಅದು ಬಹಳ ಬಿಸಿಯಾಗಿದ್ದಿರಬಹುದು. ಆದರೆ ಅದು ಸೂರ್ಯನಿಗಿಂತ ತೀರ ಚಿಕ್ಕದಾಗಿರುವುದರಿಂದ ತಣ್ಣಗಾಗತೊಡಗಿತು. ಸೂರ್ಯನ ಉಷ್ಣತೆಯೂ ಕಡಿಮೆಯಾಗುತ್ತಲಿರುವುದು. ಆದರೆ ಅದು ತೀರ ಕಡಿಮೆಯಾಗಿ, ತಂಪಾಗಲು ಕೋಟ್ಯನುಕೋಟಿ ವರುಷಗಳು ಬೇಕಾಗುವುವು. ಭೂಮಿ ತಣ್ಣಗಾಗಲಿಕ್ಕೆ ತೀರ ಕುಸುಕಾಲ ಸಾಕಾಯಿತು. ಅದು ಬಿಸಿಯಾಗಿರುವಾಗ ಮನುಷ್ಯರು, ಪಶುಗಳು, ಗಿಡಗಂಟಿ ಮುಂತಾದ ಯಾವುದಕ್ಕೂ ಅದರ ಮೇಲೆ ಬದುಕಿರಲು ಸಾಧ್ಯವಾಗುವಂತಿದ್ದಿಲ್ಲ. ಪ್ರತಿಯೊಂದೂ ಸುಟ್ಟು ಹೋಗಬಹುದಾಗಿತ್ತು.

ಸೂರ್ಯನ ಒಂದು ಪಾಲು ಸಿಡಿದು ಹೊರಹೊರಟು ಭೂಮಿಯಾದಂತೆ, ಭೂಮಿಯ ಒಂದು ಭಾಗ ಸಿಡಿದು ಬೇರೆಯಾಗಿ ಚಂದ್ರ-ಬಿಂಬವಾಯಿತು. ದೊಡ್ಡದಾದ ಪೊಳ್ಳು ಸ್ಥಳದಿಂದ ಚಂದ್ರನು ಹೊರಬಿದ್ದಿರಬಹುದೆಂದೂ, ಅಮೇರಿಕೆ ಮತ್ತು ಜಪಾನುಗಳ ನಡುವಿನ ಶಾಂತಿ(ಪ್ಯಾಸಿಫಿಕ್) ಮಹಾಸಾಗರವೇ ಆ ಪೊಳ್ಳು ಸ್ಥಳವಾಗಿರಬಹುದೆಂದೂ ಎಷ್ಟೋ ಜನರು ತಿಳಿಯುತ್ತಾರೆ.

ಹೀಗೆ ಭೂಮಿ ತಂಪಾಗತೊಡಗಿತು ಅದು ತಂಪಾಗುವುದಕ್ಕೆ ಬಹಳ ಕಾಲ ಬೇಕಾಯಿತು. ಭೂಮಿಯ ಒಳಭಾಗ ಬಿಸಿಯಾಗಿ ಉಳಿದುಕೊಂಡಿದ್ದರೂ ಅದರ ಹೊರಮೈಯು ಮೆಲ್ಲ-ಮೆಲ್ಲನೆ ತಂಪಾಯಿತು. ಇಂದಿಗೂ ಕಲ್ಲಿದ್ದಲಿಯ ಕಣಿಯೊಳಗೆ ಇಳಿದರೆ, ಕೆಳಗೆ ಇಳಿದಂತೆ ಹೆಚ್ಚು ಬೆಚ್ಚಗೆನಿಸುವುದು. ಭೂಮಿಯ ಒಳಭಾಗದಲ್ಲಿ ಬಹಳ ಆಳವಾಗಿ ಕೆಳಗೆ ಹೋಗುವುದು ಸಾಧ್ಯವಿದ್ದಿದ್ದರೆ, ಅಲ್ಲಿ ಅದು ಕೆಂಪಗೆ ಕಾದಿದ್ದುದು ನಿನಗೆ ಕಾಣುತ್ತಿತ್ತು. ಚಂದ್ರಬಿಂಬವೂ ತಂಪಾಗತೊಡಗಿತು. ಚಂದ್ರಬಿಂಬ ಭೂಮಿಗಿಂತ ಚಿಕ್ಕದಾಗಿರುವುದರಿಂದ ಭೂಮಿಗಿಂತ ಬೇಗನೆ ತಣ್ಣಗಾಯಿತು. ಈಗ ಅದು ಸೊಗಸಾಗಿಯೂ ತಂಪಾಗಿಯೂ ತೋರುವುದಿಲ್ಲವೆ? ಆದುದರಿಂದಲೇ ಅದಕ್ಕೆ "ಶೀತಲ ಚಂದ್ರ" ನೆಂದು ಹೆಸರು. ಬಹುಶಃ ಅದು ಮಂಜು-ಗುಡ್ಡಗಳಿಂದಲೂ ಮಂಜುಬೈಲುಗಳಿಂದಲೂ ತುಂಬಿಕೊಂಡಿರಬಹುದು.

ಭೂಮಿಯು ತಣ್ಣಗಾದಕೂಡಲೇ ಉಗೆಯು ಹೆಪ್ಪುಗಟ್ಟಿ ನೀರಾಗಿ ಮಳೆಯ ರೂಪಾಂತರ ಹೊಂದಿರಬಹುದು; ಮತ್ತು ಆಗ ದೊಡ್ಡ ಮಳೆಯಾಗಿರಬಹುದು. ಆ ಮಳೆನೀರೆಲ್ಲ ಭೂಮಿಯ ದೊಡ್ಡ ದೊಡ್ಡ ಪೊಳ್ಳು ಸ್ಥಳಗಳಲ್ಲಿ ತುಂಬಿಕೊಂಡಿತು. ಹೀಗೆ ನೀರು ನಿಂತ ಸ್ಥಳಗಳೇ ಸಮುದ್ರಗಳೂ ಮಹಾಸಾಗರಗಳೂ ಆದುವು.

ಭೂಮಿಯೂ ಮಹಾಸಾಗರಗಳೂ ತಂಪಾಗುತ್ತಿದ್ದಂತೆ ಭೂಮಿಯ ಮೇಲ್ಮೈಯಲ್ಲಿ ಮತ್ತು ಸಮುದ್ರದಲ್ಲಿ ಪ್ರಾಣಿಗಳಿಗೆ ಬದುಕಲು ಅನುಕೂಲವಾಯಿತು. ಪ್ರಾಣಿಗಳ ಮೊಟ್ಟಮೊದಲಿನ ಸ್ಥಿತಿಯನ್ನು ನಾವು ಇನ್ನೊಂದು ಪತ್ರದಲ್ಲಿ ಚರ್ಚಿಸುವಾ.

---

೬

# ಜೀವವುಳ್ಳ ಮೊಟ್ಟಮೊದಲಿನ ವಸ್ತುಗಳು

ನಮ್ಮ ಭೂಮಿ ಎಷ್ಟೋ ಕಾಲದ ತನಕ ಕಿಚ್ಚಿನಂತೆ ಬಿಸಿಯಾಗಿದ್ದು, ಅದರಲ್ಲಿ ಯಾವ ಪ್ರಾಣಿಗೂ ಬದುಕಿರಲು ಸಾಧ್ಯವಿದ್ದಿಲ್ಲವೆಂದು ಹಿಂದಿನ ಓಲೆಯಿಂದ ನಮಗೆ ತಿಳಿಯಿತು. ಭೂಮಿಯ ಮೇಲೆ ಜೀವನ ಎಂದು

ಮೊದಲಾಯಿತು, ಮತ್ತು ಮೊದಲನೆ ಪ್ರಾಣಿಗಳು ಯಾವುವು, ಎಂಬ ಪ್ರಶ್ನೆ ಬಹಳ ಮನೋರಂಜಕವಾಗಿದೆ. ಆದರೆ ಇದಕ್ಕೆ ಉತ್ತರ ಕೊಡುವುದು ಮಾತ್ರ ಬಲು ಬಿಗಿಯಾದ ಕೆಲಸ. ಜೀವವೆಂದರೇನು, ಎಂಬುದನ್ನು ಕುರಿತು ಮೊದಲು ಯೋಚಿಸೋಣ. ಮನುಷ್ಯರೂ, ಅವರಂತೆ ಪಶುಗಳೂ ಜೀವವುಳ್ಳ ಪ್ರಾಣಿಗಳೆಂದು ನೀನು ಹೇಳಬಹುದು. ಆದರೆ ಗಿಡಗಂಟೆ, ಹೂ, ಶಾಕಾದಿಗಳು? ನಿಜವಾಗಿ ಅವೂ ಪ್ರಾಣಿಗಳೇ. ಅವೂ ಬೆಳೆಯುವವು, ನೀರು ಕುಡಿಯುವವು, ಉಸಿರಾಡಿಸುವವು ಮತ್ತು ಸಾಯುವವು. ಗಿಡಗಳಿಗೂ ಪಶುಗಳಿಗೂ ಇರುವ ಮುಖ್ಯ ಭೇದವೇನೆಂದರೆ, ಗಿಡಗಳು ನಡೆದಾಡುವುದಿಲ್ಲ. ಲಂಡನ್ ಪಟ್ಟಣದ 'ಕ್ಯೂ' ಎಂಬ ತೋಟದಲ್ಲಿ ನಾನು ನಿನಗೆ ಕೆಲವು ಸಸಿಗಳನ್ನು ತೋರಿಸಿದ್ದೆ. ಇದು ನಿನಗೆ ನೆನಪಿರಬಹುದು ಈ 'ಆರ್ಚಿಡ್' ಮತ್ತು 'ಪಿಚರ್' ಎಂಬ ಸಸಿಗಳು ನೊಣಗಳನ್ನು ತಿನ್ನುತ್ತವೆ. ಕಡಲಪಾಚಿ (Sponges) ಗಳಂತಿರುವ ಇನ್ನೂ ಕೆಲವು ಚಲಿಸದ ಪ್ರಾಣಿಗಳುಂಟು. ಇವು ಸಮುದ್ರದ ತಳದಲ್ಲಿರುವವು. ಯಾವುದೊಂದು ವಸ್ತುವನ್ನು, ಅದೇನು ಪ್ರಾಣಿಯೊ ಸಸಿಯೊ ಎಂದು ಒಮ್ಮೊಮ್ಮೆ ಹೇಳುವುದು ಕಷ್ಟವಾಗುತ್ತದೆ. ವನಸ್ಪತಿಶಾಸ್ತ್ರವನ್ನಾಗಲಿ ಪ್ರಾಣಿಶಾಸ್ತ್ರವನ್ನಾಗಲಿ ನೀನು ಅಭ್ಯಾಸ ಮಾಡಿದರೆ ನಿನಗೆ ಕೆಲವು ವಿಲಕ್ಷಣ ಪದಾರ್ಥಗಳು ಗೊತ್ತಾಗುವವು. ಇಂತಹವು ಪೂರ್ಣವಾಗಿ ಪ್ರಾಣಿಗಳೂ ಅಲ್ಲ, ಸಸಿಗಳೂ ಅಲ್ಲ.

ಕಲ್ಲುಗಳಿಗೂ ಗುಡ್ಡಗಳಿಗೂ ಒಂದು ತರದ ಪ್ರಾಣವಿದೆಯೆಂದೂ, ಅವುಗಳಿಗೂ ನೋವಿನ ಅನುಭವ ಆಗುವುದೆಂದೂ ಕೆಲವು ಜನರು ಹೇಳುತ್ತಾರೆ. ಆದರೆ ಅದನ್ನು ಕಂಡುಕೊಳ್ಳುವುದು ಬಹಳ ಗಡಚು. ಜಿನೇವಾ ಪಟ್ಟಣದಲ್ಲಿ ಒಬ್ಬ ಗೃಹಸ್ಥನು ನಮ್ಮನ್ನು ಕಾಣಲು ಬಂದದ್ದು ನಿನಗೆ ನೆನಪಿರಬಹುದು. ಆ ಗೃಹಸ್ಥನ ಹೆಸರು ಸರ್ ಜಗದೀಶ ಚಂದ್ರ ಬೋಸ್. ಸಸಿಗಳಿಗೂ ಜೀವವಿದೆಯೆಂದು ಅವನು ಪ್ರಯೋಗದಿಂದ ಸಿದ್ಧಪಡಿಸಿದ್ದಾನೆ. ಕಲ್ಲುಗಳಲ್ಲಿಯೂ ಒಂದು ತರದ ಜೀವವಿದೆಯೆಂದು ಅವನ ಅಭಿಪ್ರಾಯ.

ಪ್ರಾಣವಿರುವ ವಸ್ತು ಯಾವುದು, ಪ್ರಾಣವಿಲ್ಲದಿರುವ ವಸ್ತು ಯಾವುದು ಎಂದು ಹೇಳುವುದು ಸುಲಭವಲ್ಲ. ಸದ್ಯಕ್ಕೆ ಕಲ್ಲುಗಳ ವಿಷಯವನ್ನು ಬಿಟ್ಟು ಗಿಡಗಂಟೆ ಮತ್ತು ಪ್ರಾಣಿಗಳನ್ನಷ್ಟೆ ಯೋಚಿಸೋಣ. ಎಣಿಕೆ

ಇಲ್ಲವಷ್ಟು ಪ್ರಾಣಿಗಳು ಈಗ ನಮ್ಮ ಕಣ್ಣಿಗೆ ಬೀಳುತ್ತವೆ. ಇವುಗಳಲ್ಲಿ ಎಲ್ಲ ತರದ ಪ್ರಾಣಿಗಳೂ ಸೇರಿವೆ; ಗಂಡಸರೂ ಸೇರಿದ್ದಾರೆ, ಹೆಂಗಸರೂ ಸೇರಿದ್ದಾರೆ. ಇವರಲ್ಲಿ ಕೆಲವರು ಚುರುಕು ಬುದ್ಧಿಯುವರಿರುವರು. ಕೆಲವರು ಮಂದಬುದ್ಧಿಯುವರು ಇಲ್ಲವೆ ದಡ್ಡರು. ಇದಲ್ಲದೆ ಪಶುಗಳು ಬೇರೆ. ಅವುಗಳಲ್ಲಿಯೂ ಆನೆ, ಕೋತಿ, ಇರುವೆಗಳಂತಹ ಚುರುಕು ಪ್ರಾಣಿಗಳಿವೆ. ಬುದ್ಧಿ ಇಲ್ಲದ ಮಂಕು ಪ್ರಾಣಿಗಳೂ ಕಾಣುತ್ತವೆ. ಸಮುದ್ರದಲ್ಲಿಯ ಮೀನು ಮತ್ತು ಜೀವವುಳ್ಳ ಅನೇಕ ಪದಾರ್ಥಗಳು ಪ್ರಾಣಿವರ್ಗಗಳಲ್ಲಿ ಇನ್ನೂ ಕೆಳಗಿನ ತರಗತಿಯುವು. ಇವೆಲ್ಲಕ್ಕಿಂತ ಕೆಳಗಿನ ಪಂಗಡದ ಪ್ರಾಣಿಗಳೆಂದರೆ ಕಡಲ-ಪಾಚಿ, ಜಲ್ಲಿ-ಮೀನುಗಳು ಮತ್ತು ಅರ್ಧಸಸಿ ಅರ್ಧ ಪ್ರಾಣಿಗಳಂತಿರುವ ವಸ್ತುಗಳು.

ಈ ಎಲ್ಲ ತರದ ಬೇರೆ ಬೇರೆ ಪ್ರಾಣಿಗಳು ಒಂದೇ ಸಮುಯದಲ್ಲಿ ಹುಟ್ಟಿದುವೋ ಅಥವಾ ಮೆಲ್ಲ-ಮೆಲ್ಲನೆ ಒಂದರ ಹಿಂದೆ ಒಂದರಂತೆ ಹುಟ್ಟಿ ಬಂದುವೊ ಎಂಬುದನ್ನು ಗೊತ್ತುಮಾಡಿಕೊಳ್ಳಲು ನಾವು ಯತ್ನಿಸಬೇಕಾಗಿದೆ. ಇದು ನಮಗೆ ಗೊತ್ತಾಗುವುದು ಹೇಗೆ? ಅಂತಹ ಪುರಾತನ ಕಾಲದ ಪುಸ್ತಕಗಳು ನಮಗೆ ದೊರೆಯುವುದಿಲ್ಲ. ಆದರೆ ಸೃಷ್ಟಿಯ ಪುಸ್ತಕ ನಮಗೆ ನೆರವಾಗಬಹುದೆ? ಅಹುದು ನೆರವಾಗುವುದು. ನಮಗೆ ಹಳೆಯ ಬೆಟ್ಟಗಳಲ್ಲಿ ಪ್ರಾಣಿಯ ಎಲುಬು ದೊರೆಯುತ್ತವೆ. ಇವುಗಳಿಗೆ ಇಂಗ್ಲಿಷಿನಲ್ಲಿ 'ಫಾಸಿಲ್ಸ್' ಎಂದು ಹೆಸರು. ಆ ಬೆಟ್ಟ ರಚನೆಯಾಗುವ ಪ್ರಾಚೀನ ಕಾಲದಲ್ಲಿ ಆಯಾ ಪ್ರಾಣಿಗಳು ಬದುಕಿ ಬಾಳಿರಬಹುದೆಂದು ಈ ಎಲುಬುಗಳಿಂದ ನಾವು ಹೇಳಬಲ್ಲೆವು. ಈ ತರದ ಸಣ್ಣ ದೊಡ್ಡ ಅನೇಕ ಎಲುಬುಗಳ ಅವಶೇಷಗಳನ್ನು ಲಂಡನ್ ನಗರದಲ್ಲಿಯ ಸೌಥ್ ಕೆನ್ಸಿಂಗಟನ್ ಎಂಬ ಪ್ರಾಚೀನ ವಸ್ತು-ಸಂಗ್ರಹಾಲಯದಲ್ಲಿ ನೀನು ನೋಡಿರುವೆ.

ಪ್ರಾಣಿ ಸತ್ತಕೂಡಲೇ, ಅದರ ಶರೀರದ ಮಾಂಸ ಬೇಗನೆ ಕೊಳೆತು ಹೋಗುವುದು. ಆದರೆ ಅದರ ಎಲುಬು ಬಹಳ ಕಾಲದ ವರೆಗೆ ಉಳಿಯುತ್ತವೆ. ಹಿಂದಿನ ಕಾಲದಲ್ಲಿ ಬಾಳಿಹೋದ ಪ್ರಾಣಿಗಳ ಸಂಗತಿಗಳು ನಮಗೆ ಗೊತ್ತಾವುದು ಇವೇ ಎಲುಬುಗಳಿಂದ. ಆದರೆ ಜಲ್ಲಿ-ಮೀನುಗಳಂತಹ ಪ್ರಾಣಿಗಳಿಗೆ ಎಲುಬೇ ಇರುವುದಿಲ್ಲ. ಆದುದರಿಂದ ಅವು ಸತ್ತಮೇಲೆ ಅವುಗಳ ಯಾವ ಗುರುತೂ ಉಳಿಯುವುದಿಲ್ಲ.

ಬೆಟ್ಟಗಳನ್ನು ನಾವು ಎಚ್ಚರದಿಂದ ಪರೀಕ್ಷಿಸಿ ನಮಗೆ ದೊರೆಯುವ ಹಿಂದಿನ ಕಾಲದ ' ಫಾಸಿಲ್ ' ಎಲುಬುಗಳನ್ನು ಕಲೆಹಾಕಿದರೆ, ಬೇರೆಬೇರೆ ಕಾಲಗಳಲ್ಲಿ ಬೇರೆ ಬೇರೆ ಜಾತಿಯ ಪ್ರಾಣಿಗಳು ಬದುಕಿ ಬಾಳಿದ್ದವೆಂದು ನಮಗೆ ಗೊತ್ತಾಗುತ್ತದೆ. ಇವೆಲ್ಲವೂ ಒಟ್ಟುಗೂಡಿ ಒಮ್ಮಿಂದೊಮ್ಮೆ ಹುಟ್ಟಲಿಲ್ಲ. ಮೊಟ್ಟಮೊದಲು ಇದ್ದುದು ಶಂಖಗಳಿಂದೊಡಗೂಡಿದ ಸಾಮಾನ್ಯ ಪ್ರಾಣಿಗಳು, ಎಂದರೆ, ಶಂಖದ ಮೀನುಗಳು. ಕಡಲ ದಂಡೆಯಲ್ಲಿ ದೊರೆಯುವ ಚೆಲುವಾದ ಶಂಖಗಳೆಲ್ಲವೂ ಸತ್ತುಹೋದ ಪ್ರಾಣಿಗಳ ಎಲುಬಿನ ಹಂದರಗಳೇ. ಆಮೇಲೆ ಹೆಚ್ಚುಹೆಚ್ಚಾದ ತೊಡಕುಳ್ಳ ಪ್ರಾಣಿಗಳು, ಎಂದರೆ ಹಾವುಗಳು, ಈಗಿನ ಆನೆಗಳಿಗಿಂತ ಬಲು ದೊಡ್ಡ ಪಶುಗಳು, ಮತ್ತು ಈಗಿನ ಪಶುಪಕ್ಷಿಗಳಂತಹ ಪ್ರಾಣಿಗಳು ನಮಗೆ ಕಾಣುತ್ತವೆ. ನಮಗೆ ಸಿಗುವ ಕೊನೆಯ ಅವಶೇಷವೆಂದರೆ ಮನುಷ್ಯ ಪ್ರಾಣಿಯದು. ಹೀಗೆ ಪ್ರಾಣಿಯ ಹುಟ್ಟುವಳಿಯಲ್ಲಿ ಒಂದು ಕ್ರಮ ಕಂಡುಬರುವುದು ಮೊಟ್ಟ-ಮೊದಲು ಅತಿ ಸಾದಾ ಪ್ರಾಣಿಗಳು. ಅಲ್ಲಿಂದ ಹೆಚ್ಚು-ಹೆಚ್ಚಾದ ತೊಡಕುಳ್ಳ ಮೇಲ್ತರಗತಿಯ ಪ್ರಾಣಿಗಳು. ಕೊನೆಗೆ ಇವೆಲ್ಲವುಗಳಿಗಿಂತ ಶ್ರೇಷ್ಠ ಪ್ರಾಣಿಯಾದ ಮನುಷ್ಯನು. ಸುಲಭವಾದ ಪಾಚಿ ಮತ್ತು ಶಂಖದ ಮೀನುಗಳು ಬೆಳೆಯುತ್ತ, ಬದಲಾಗುತ್ತ, ರೂಪುಗೊಳ್ಳುತ್ತ, ಕೊನೆಗೆ ತಾವಾಗಿಯೇ ಇಷ್ಟೊಂದು ಹೇಗೆ ಸುಧಾರಿಸಿಕೊಂಡವು ಎಂಬುದು ಅತಿ ಮನೋಹರವಾದ ವಿಷಯ. ಯಾವುದಾದರೊಂದು ದಿನ ನಾನು ಈ ವಿಷಯವನ್ನೆಲ್ಲ ನಿನಗೆ ತಿಳಿಹೇಳುವೆನು. ಆದರೆ ಸದ್ಯಕ್ಕೆ ಜೀವವುಳ್ಳ ಮೊಟ್ಟ-ಮೊದಲಿನ ವಸ್ತುಗಳ ವಿಷಯವನ್ನು ನಾವು ತಿಳಿದುಕೊಳ್ಳಬೇಕಾಗಿದೆ.

ಶಂಖ ಅಥವಾ ಎಲುಬುಗಳಿಲ್ಲದ ಜಲ್ಲಿಯಂತಹ ಮೆತ್ತಗಿನ ವಸ್ತುಗಳೆ ಭೂಮಿ ತಣ್ಣಗಾದ ಕೂಡಲೆ ಹುಟ್ಟಿದ ಜೀವವುಳ್ಳ ಮೊದಲನೆ ಪದಾರ್ಥಗಳೆಂದು ತೋರುತ್ತದೆ. ಇವು ಸಮುದ್ರದಲ್ಲಿದ್ದಿರಬಹುದು. ಈ ಜೀವಿತ ವಸ್ತುಗಳ ಎಲುಬಿನ ಅವಶೇಷಗಳು ನಮಗೆ ದೊರೆಯುವುದಿಲ್ಲ. ಯಾಕೆಂದರೆ ಇವುಗಳಿಗೆ ಎಲುಬುಗಳಿದ್ದಿಲ್ಲ. ಆದುದರಿಂದ ನಾವು ಅಂತೂ ಇಂತೂ ಊಹಿಸಬೇಕಾಗಿದೆ. ಜಲ್ಲಿಯಂತಹ ಇಂತಹ ವಸ್ತುಗಳು ಇಂದಿಗೂ ನಮಗೆ ಸಮುದ್ರದಲ್ಲಿ ದೊರೆಯುತ್ತವೆ. ಇವು ಗುಂಡಗಿರುತ್ತವೆ. ಆದರೆ ಎಲುಬು ಇಲ್ಲವೆ ಶಂಖವಿಲ್ಲದುದರಿಂದ ಇವುಗಳ ಆಕಾರ ಒಂದೇಸಮನಾಗಿ

ಬದಲಾಗುತ್ತಿರುತ್ತದೆ. ಇವು ಸಾಧಾರಣವಾಗಿ ಹೀಗಿರುವುವು :



ಇವುಗಳ ನಡುವೆ ಒಂದು ಚುಕ್ಕೆ ನಿನಗೆ ಕಾಣುವುದು. ಅದು ಬೀಜಾಣು-ಎಂದರೆ ಒಂದು ತರದ ಹೃದಯ. ಈ ಪ್ರಾಣಿಗಳು ಏನೇ ಇರಲಿ; ಇವುಗಳಲ್ಲಿ ತಮ್ಮಿಂದ ತಾವೇ ಇಬ್ಭಾಗವಾಗುವ ಬಲು ವಿಲಕ್ಷಣ ವಾದ ರೀತಿ ಇದೆ. ಒಂದು ಸ್ಥಳದಲ್ಲಿ ಇವು ಚಿಕ್ಕವಾಗತೊಡಗುತ್ತವೆ. ಹೀಗೆಯೇ ಚಿಕ್ಕವಾಗುತ್ತ ಆಗುತ್ತ ಕೊನೆಗೆ ಒಡೆದು ಜಲ್ಲಿಯಂತಹ ಎರಡು ವಸ್ತುಗಳಾಗುತ್ತವೆ. ಆದರೆ ಇವೆರಡೂ ಮೂಲ ವಸ್ತುವಿನಂತೆಯೇ ಆಗುವವು. ಈ ಇಬ್ಭಾಗವಾಗುವುದು ಹೀಗೆ :



ಇಲ್ಲಿ ಹೃದಯವು ಕೂಡ ಇಬ್ಭಾಗವಾಗುವುದು ಸ್ಪಷ್ಟವಾಗಿ ಗೊತ್ತಾ ಗುತ್ತದೆ. ಒಂದೊಂದು ಭಾಗಕ್ಕೆ ಅದರ ಒಂದೊಂದು ತುಣುಕು ಸೇರಿ ಕೊಳ್ಳುತ್ತದೆ. ಹೀಗೆಯೇ ಈ ಪ್ರಾಣಿಗಳು ಭಾಗವಾಗುತ್ತ ಮತ್ತು ಬೆಳೆ ಯುತ್ತ ನಡೆಯುತ್ತವೆ.

ಇದೇ ಬಗೆಯ ಪ್ರಾಣಿಯೊಂದು ಮೊದಲು ನಮ್ಮ ಭೂಮಿಯ ಮೇಲೆ ಇದ್ದಿರಬಹುದು. ಪ್ರಾಣಿಯು ಎಂತಹ ಬಡ ಮತ್ತು ಸಾದಾ ಮಾದರಿಯದು! ಆಗ ಇದಕ್ಕಿಂತ ಉತ್ತಮವಾದ ಮತ್ತು ಶ್ರೇಷ್ಠವಾದ ಪ್ರಾಣಿ ಇಡೀ ಜಗತ್ತಿನಲ್ಲೇ ಇರಲಿಲ್ಲ, ನಿಜವಾದ ಪ್ರಾಣಿ ಇನ್ನೂ ಹುಟ್ಟಿ ರಲಿಲ್ಲ. ಮನುಷ್ಯನಂತೂ ಮುಂದಿನ ಲಕ್ಷೋಪಲಕ್ಷ ವರುಷಗಳ ವರೆಗೆ ಹುಟ್ಟುವಂತಿರಲಿಲ್ಲ.

ಈ ಜಲ್ಲಿಯಂತಹ ವಸ್ತುಗಳ ನಂತರ ಸಮುದ್ರದ ಅಪು (Sea-weeds), ಶಂಖದ ಮೀನು, ಏಡಿ ಮತ್ತು ಹುಳುಹುಪ್ಪಡಿಗಳು ತಲೆದೋರಿ ದವು. ಆಮೇಲೆ ಮೀನು ತಲೆಯೆತ್ತಿದ್ದು. ಇವುಗಳ ಬಗೆಗೆ ನಮಗೆ ಅನೇಕ ಸಂಗತಿಗಳು ಗೊತ್ತಾಗುತ್ತವೆ. ಏಕೆಂದರೆ, ಇವುಗಳಿಗೆ ಬಿರುಸಾದ ಎಲುಬಿನ

ಭಾಗಗಳು ಮತ್ತು ಶಂಖಗಳಿದ್ದುವು. ಈ ಪ್ರಾಣಿಗಳು ಬಿಟ್ಟು ಹೋದ ತಮ್ಮ ಎಲುಬು ಬಹಳ ಕಾಲದ ನಂತರವೂ ಈಗ ನಮಗೆ ದೊರೆಯುತ್ತವೆ. ನಾವು ಅವುಗಳ ಅಭ್ಯಾಸ ಮಾಡಬಹುದು. ಶಂಖಗಳು ಸಮುದ್ರದ ಬುಡದ ಕೆಸರಿನಲ್ಲಿ ಸಿಕ್ಕಿಕೊಂಡವು. ಅವುಗಳ ಮೇಲೆ ಹೊಸ ಒಂಡು ಮತ್ತು ಉಸುಕು ಬಿದ್ದು ಹುಗಿದು ಹೋಗಿ ಹಾಗೆಯೆ ಉಳಿದುಕೊಂಡವು. ಮೇಲೆ ಬಿದ್ದ ಉಸುಕಿನ ಹೊರೆಯಿಂದ ಈ ಕೆಸರು ಗಟ್ಟಿಯಾಯಿತು. ಗಟ್ಟಿಯಾಗುತ್ತ ಆಗುತ್ತ, ನೀರ್ಗಟ್ಟವಾಯಿತು. ಸಮುದ್ರದಲ್ಲಿ ನೀರ್ಗಟ್ಟಗಳಾದುದು ಹೀಗೆಯೇ. ಭೂಕಂಪ ಇಲ್ಲವೆ ಇನ್ನೇನಾದರೊಂದು ಕಾರಣದಿಂದ ಈ ಬೆಟ್ಟ ಸಮುದ್ರ ಬುಡದಿಂದ ಮೇಲಕ್ಕೆದ್ದು ಅದೇ ಒಣ ನೆಲವಾಯಿತು. ಮುಂದೆ ಮಳೆಯ ಮತ್ತು ನದಿಯ ನೀರಿನಿಂದ ಈ ಒಣ ದಿನ್ನೆಗಳು ಕೊಚ್ಚಿ ಹೋಗಿ ಸವೆದುವು. ಆಗ ಕಾಲಾನುಕಾಲದಿಂದ ಹುದುಗಿಕೊಂಡಿದ್ದ ಈ ಶಂಖಗಳು ಹೊರಬಿದ್ದವು. ಶಂಖಗಳು ಅಥವಾ ಎಲುಬಿನ ಹಂದರ (ಫಾಸಿಲ್ಲು) ಗಳು ನಮಗೆ ದೊರೆಯುವ ಬಗೆ ಇದೇ. ಇದೇ ಎಲುಬಿನ ಹಂದರಗಳನ್ನು ನಾವು ಪರೀಕ್ಷಿಸಿ ಅಭ್ಯಾಸ ಮಾಡಿ, ಮನುಷ್ಯನು ಕಾಣಿಸಿ ಕೊಳ್ಳುವ ಮೊದಲು, ಪ್ರಾಚೀನ ಕಾಲದಲ್ಲಿ ನಮ್ಮ ಭೂಮಿ ಹೇಗಿದ್ದಿರ ಬಹುದೆಂದು ಕಂಡುಹಿಡಿಯುತ್ತೇವೆ.

ಇಂತಹ ತೊಡಕಿಲ್ಲದ ಪ್ರಾಣಿಗಳು ಹೇಗೆ ಬೆಳೆದುವು ಮತ್ತು ಅವು ಈಗಿರುವಂತೆ ಹೇಗೆ ಆದುವು ಎಂಬುದನ್ನು ನಾವು ಮುಂದಿನ ಓಲೆಯಲ್ಲಿ ಯೋಚಿಸೋಣ.

---

೫

# ಪಶುಗಳು ಕಾಣಿಸಿಕೊಂಡವು

ಸಮುದ್ರದೊಳಗಿನ ಸರಳಾಕಾರದ ಪುಟ್ಟ ಪ್ರಾಣಿಗಳೂ ನೀರಿನಲ್ಲಿಯ ಮೆದೆಗಳೂ ನಮ್ಮ ಜಗತ್ತಿನಲ್ಲಿ ಹುಟ್ಟಿದ ಪ್ರಾಣಿಗಳ ಮೊಟ್ಟಮೊದಲಿನ ಗುರುತಾಗಿರಬಹುದೆಂದು ನಾವು ತಿಳಿದುಕೊಂಡೆವು. ಈ ವಸ್ತುಗಳು ನೀರೊಳಗೆ ಮಾತ್ರ ಬದುಕಿರಬಲ್ಲವಾಗಿದ್ದುವು. ಈಗಿನ ಜಲ್ಲಿ-ಮೀನು

ದಂಡೆಯ ಮೇಲೆ ಬಂದರೆ ಒಣಗಿ ಸಾಯುವಂತೆ ಅವೂ ನೀರ ಹೊರಗೆ ಬಂದ ಕೂಡಲೇ ಸಾಯುತ್ತಿರಬಹುದು. ಈಗಿನಕಿಂತ ಆಗಿನ ಕಾಲದಲ್ಲಿ ನೀರು ಮತ್ತು ಜವುಗು ಭೂಮಿಯೆ ಹೆಚ್ಚಾಗಿದ್ದಿರಬಹುದು. ಆದರೆ ತುಸು ಮಾತ್ರ ಮೈದೊಗಲುಳ್ಳ ಜಲ್ಲಿ-ಮೀನುಗಳು ಮತ್ತು ಕಡಲ ಪ್ರಾಣಿಗಳು ನೆಲದ ಮೇಲೆ ಇತರ ಪ್ರಾಣಿಗಳಿಗಿಂತ ಹೆಚ್ಚು ಕಾಲ ಬಾಳಬಲ್ಲವಾಗಿದ್ದುವು. ಏಕೆಂದರೆ ಇವು ಬೇಗನೆ ಒಣಗುತ್ತಿದ್ದಿಲ್ಲ. ಹೀಗೆ ಇವುಗಳಿಗಿಂತ ಮೆದುವಾದ ಜಲ್ಲಿ-ಮೀನುಗಳು ಮತ್ತು ಇಂತಹ ಉಳಿದ ವಸ್ತುಗಳು ಒಣ ನೆಲವನ್ನು ಎದುರಿಸುವ ಶಕ್ತಿ ಇಲ್ಲದುದರಿಂದ ಮೆಲ್ಲ-ಮೆಲ್ಲನೆ ಕಡಿಮೆಯಾಗತೊಡಗಿದವು; ಮತ್ತು ಬಿರುಸು ಹೊದಿಕೆಯುಳ್ಳ ಪ್ರಾಣಿಗಳು ಹೆಚ್ಚಾದುವು. ಇದು ತಿಳಿದುಕೊಳ್ಳಲು ಒಳ್ಳೆ ಮನೋಹರವಾದ ಸಂಗತಿ ಪ್ರಾಣಿಗಳು ತಮ್ಮ ತಮ್ಮ ಸುತ್ತುಮುತ್ತಲಿನ ಪರಿಸ್ಥಿತಿಯೊಂದಿಗೆ ಮೆಲ್ಲ-ಮೆಲ್ಲನೆ ತಮ್ಮನ್ನು ಸರಿಪಡಿಸಿಕೊಳ್ಳುತ್ತವೆಂಬುದೇ ಇದರ ಅರ್ಥ. ಚಳಿಗಾಲದಲ್ಲಿ ಮತ್ತು ಚಳಿಯುಳ್ಳ ಹಿಮ-ಪ್ರದೇಶದಲ್ಲಿ ಪಶು ಪಕ್ಷಿಗಳು ಹಿಮದಂತೆ ಹೇಗೆ ಬೆಳ್ಳಗಾಗಿರುತ್ತವೆಂಬುದನ್ನು ಲಂಡನ್ ಪಟ್ಟಣದ ಸೌಥ್ ಕೆನ್ಸಿಂಗ್‌ಟನ್ ವಸ್ತು-ಸಂಗ್ರಹಾಲಯದಲ್ಲಿ ನೀನು ನೋಡಿರುವೆ. ಹಸುರು ಗಿಡ-ಗಂಟಿಗಳಿರುವ ಬಿಸಿಲಿನ ದೇಶದಲ್ಲಿ ಅವು ಹಸುರು ಇಲ್ಲವೆ ಮಿಂಚುವ ಬೇರೆ ಒಂದು ಬಣ್ಣವನ್ನು ತಳೆಯುತ್ತವೆ. ಎಂದರೆ ತಮ್ಮ ಸುತ್ತುಮುತ್ತಲಿನ ಪರಿಸ್ಥಿತಿಗೆ ತಕ್ಕಂತೆ ಅವು ತಮ್ಮನ್ನು ಹೊಂದಿಸಿಕೊಳ್ಳುತ್ತವೆ. ಸುತ್ತು-ಮುತ್ತಲಿನ ಬಣ್ಣದಂತೆ ಅವುಗಳ ಮೈಬಣ್ಣವಾಗುವುದರಿಂದ ಅವು ಸಹಜವಾಗಿ ಹಗೆಗಳ ಕಣ್ಣಿಗೆ ಬೀಳುವುದಿಲ್ಲ. ತಮ್ಮನ್ನು ಹಗೆಗಳಿಂದ ಕಾಪಾಡಿಕೊಳ್ಳುವುದಕ್ಕಾಗಿ ಅವು ಹೀಗೆ ಬಣ್ಣವನ್ನು ಮಾರ್ಪಡಿಸಿಕೊಳ್ಳುತ್ತಿರುತ್ತವೆ. ಚಳಿಗಾಲದಲ್ಲಿ ಬೆಚ್ಚಗೆ ಮಾಡಿಕೊಳ್ಳುವುದಕ್ಕಾಗಿ ಶೀತ ಪ್ರದೇಶದೊಳಗಿನ ಈ ಪ್ರಾಣಿಗಳು ತಮ್ಮ ಮೈಮೇಲೆ ಉಣ್ಣೆಯನ್ನು ಬೆಳೆಯಿಸಿಕೊಳ್ಳುತ್ತವೆ. ಹುಲಿ ಪಟ್ಟೆ-ಪಟ್ಟೆಯಾಗಿಯೂ ಹಚ್ಚಗಾಗಿಯೂ ಇರುವುದು ಇದೇ ಕಾರಣದಿಂದ. ಕಾಡಿನೊಳಗಿನ ಗಿಡಗಳ ನಡುವಿನಿಂದ ತೂರಿ ಬರುವ ಸೂರ್ಯನ ಬೆಳಕಿನಂತೆ ಅದು ಕಾಣುತ್ತಿರುತ್ತದೆ. ದಟ್ಟವಾದ ಕಾಡಿನಲ್ಲಿ ಹುಲಿಯನ್ನು ಗುರುತಿಸುವುದು ಬಹಳ ಕಷ್ಟ.

ಪ್ರಾಣಿಗಳು ತಮ್ಮ ಸುತ್ತು ಮುತ್ತಲಿನ ಪರಿಸ್ಥಿತಿಯೊಂದಿಗೆ ಹೊಂದಿ

ಕೊಳ್ಳುವ ಮನೋಹರವಾದ ವಿಷಯು ಬಹಳ ಮಹತ್ವದ್ದು. ಪ್ರಾಣಿಗಳು ಮಾರ್ಪಡಿಸಿಕೊಳ್ಳಲು ತಾವಾಗಿಯೇ ಯತ್ನಿಸುವುದಿಲ್ಲ. ಆದರೆ ಪರಿಸ್ಥಿತಿಯೊಂದಿಗೆ ಹೊಂದಿಕೆಯಾಗುವಂತೆ ತಮ್ಮನ್ನು ಸರಿಪಡಿಸಿಕೊಳ್ಳುವ ಪ್ರಾಣಿಗಳಿಗೆ ಬಾಳಿರಲು ಹೆಚ್ಚು ಅನುಕೂಲ. ಆದುದರಿಂದ ಇಂತಹ ಪ್ರಾಣಿಗಳು ಹೆಚ್ಚುತ್ತವೆ; ಉಳಿದವು ಹೆಚ್ಚುವುದಿಲ್ಲ. ಇದರಿಂದ ನಮಗೆ ಗೊತ್ತಾಗುವ ಸಂಗತಿಗಳು ಬಹಳ. ಸರಳವಾದ ಪ್ರಾಣಿಗಳು ಬೆಳೆದು ಶ್ರೇಷ್ಠತರದ ಪ್ರಾಣಿಗಳಾಗುತ್ತ ಲಕ್ಷೋಪಲಕ್ಷ ವರುಷಗಳಾದಮೇಲೆ ಮನುಷ್ಯನ ಉದಯವಾಗಿರಬಹುದು. ನಮ್ಮ ಬಾಳುವೆ ತೀರ ಚಿಕ್ಕದಾಗಿರುವುದರಿಂದ ಮತ್ತು ಈ ಮಾರ್ಪಾಡುಗಳು ಅತಿ ಮೆಲ್ಲನೆ ಸಾಗುವುದರಿಂದ ಇವುಗಳನ್ನು ನಾವು ನೋಡಲಾರೆವು. ಆದರೆ ಸೃಷ್ಟಿಯು ಮಾತ್ರ ವಸ್ತುಗಳನ್ನು ಮಾರ್ಪಡಿಸುತ್ತಲೂ ಪೂರ್ಣಗೊಳಿಸುತ್ತಲೂ ಎಡೆಬಿಡದೆ ನಡೆದಿರುತ್ತದೆ. ಅದು ಎಂದಿಗೂ ನಿಲ್ಲುವುದೂ ಇಲ್ಲ, ವಿಶ್ರಾಂತಿ ಗೈಯುವುದೂ ಇಲ್ಲ.

ಜಗತ್ತು ತಣ್ಣಗಾಗುತ್ತ ಮೆಲ್ಲ-ಮೆಲ್ಲನೆ ಒಣಗುತ್ತ ನಡೆದಿರುವ ಸಂಗತಿ ನಿನಗೆ ನೆನಪಿರಬಹುದು. ಅದು ಹೆಚ್ಚು-ಹೆಚ್ಚಾಗಿ ತಣ್ಣಗಾದಂತೆ ವಾತಾವರಣ ಮಾರ್ಪಟ್ಟು ಎಷ್ಟೋ ವಸ್ತುಗಳು ಬದಲಾದವು. ಭೂಮಿ ಬದಲಾದಂತೆ ಪ್ರಾಣಿಗಳೂ ಬದಲಾದವು ಹೊಸ ತರದ ಪ್ರಾಣಿಗಳು ಮೆಲ್ಲನೆ ತಲೆದೋರಿದವು. ಮೊಟ್ಟ-ಮೊದಲು ಸಮುದ್ರದೊಳಗಿನ ಬರಿಯ ಸಾದಾ ಪ್ರಾಣಿಗಳೂ ಅನಂತರ ಕಡಲೊಳಗಿನ ತೊಡಕುಳ್ಳ ಪ್ರಾಣಿಗಳೂ ಕಣ್ಣಿಗೆ ಕಾಣುತ್ತವೆ. ಬರಬರುತ್ತ ಒಣ ನೆಲ ಹೆಚ್ಚಾದಂತೆ, ನೀರೊಳಗೂ ನೆಲದ ಮೇಲೂ ಇರುವ ಈಗಿನ ಕಪ್ಪೆ, ಮೊಸಳೆಗಳಂತಹ ಪ್ರಾಣಿಗಳು ಹುಟ್ಟಿಬರುತ್ತವೆ. ಆಮೇಲೆ, ಬರಿಯ ನೆಲದ ಮೇಲೆಯೇ ಸಂಚರಿಸುವ ಪ್ರಾಣಿಗಳೂ, ಮುಂದೆ ಗಾಳಿಯಲ್ಲಿ ಹಾರಾಡಬಲ್ಲ ಹಕ್ಕಿಗಳೂ ಒಂದರ ಹಿಂದೆ ಒಂದರಂತೆ ಹುಟ್ಟಿಬರುತ್ತವೆ.

ನಾನು ಈಗ ಕಪ್ಪೆಯನ್ನು ಕುರಿತು ಹೇಳಲಿಲ್ಲವೆ? ಇದರಿಂದ ನಮಗೊಂದು ಮನೋಹರವಾದ ಸಂಗತಿ ಗೊತ್ತಾಗುತ್ತದೆ. ಪ್ರಾಣಿಗಳು ಮೊದಲು ಮೊದಲು ನೀರಿನಲ್ಲಿಯೇ ಇರುತ್ತಿದ್ದು ಬರಬರುತ್ತ ಹೇಗೆ ನೆಲದ ಮೇಲೆ ಇರತೊಡಗಿದುವೆಂಬುದು ನಮಗೆ ಕಪ್ಪೆಯ ಬಾಳುವೆಯಿಂದ ಗೊತ್ತಾಗುತ್ತದೆ. ಕಪ್ಪೆ ಮೊದಲು ಮೀನಾಗಿದ್ದು ಅನಂತರ ನೆಲದ ಮೇಲಿನ

ಪ್ರಾಣಿಯಂತಾಗಿ, ಉಳಿದೆಲ್ಲ ಪ್ರಾಣಿಗಳು ಉಸಿರಾಡಿಸುವಂತೆ ಅದೂ ತನ್ನ ಪುಪ್ಪುಸಗಳಿಂದ ಉಸಿರಾಡಿಸುತ್ತದೆ.

ಪ್ರಾಚೀನ ಕಾಲದಲ್ಲಿ ನೆಲದ ಮೇಲೆ ಜೀವನ ಮೊದಲಾದಾಗ ಅಲ್ಲಿ ದೊಡ್ಡ ದೊಡ್ಡ ಕಾಡುಗಳಿದ್ದುವು. ನೆಲವೆಲ್ಲ ತೇವವಾಗಿದ್ದುದರಿಂದ ದಟ್ಟ ಡವಿಗಳಿದ್ದುವು. ಆಮೇಲೆ ಈ ಅಡವಿಗಳು ಮುಚ್ಚಿ ಹೋದುವು. ಮೇಲಿನ ಕಲ್ಲು ಮಣ್ಣಿನ ಹೊರೆಯಿಂದ ಈ ಎಲ್ಲ ಕಾಡುಗಳು ಕಲ್ಲಿದ್ದಲಾದುವು. ಭೂಮಿಯಲ್ಲಿ ತೀರ ಒಳಗಿರುವ ಕಣಿಗಳಿಂದ ಕಲ್ಲಿದ್ದಲು ದೊರೆಯುತ್ತಿರುವುದು ನಿನಗೆ ಗೊತ್ತಿದೆ. ಆ ಹಿಂದಿನ ಕಾಲದ ಹಳೆಯ ಕಾಡುಗಳೇ ಈಗಿನ ಕಲ್ಲಿದ್ದಲಿನ ಕಣಿಗಳು.

ನೆಲದ ಮೇಲಿನ ಮೊಟ್ಟ-ಮೊದಲಿನ ಪ್ರಾಣಿಗಳೆಂದರೆ ದೊಡ್ಡ ದೊಡ್ಡ ಹಲ್ಲಿಗಳು, ಮೊಸಳೆಗಳು, ಹೆಬ್ಬಾವುಗಳು. ಇವುಗಳಲ್ಲಿ ಕೆಲವಂತೂ ನೂರಾರು ಅಡಿ ಉದ್ದವಾಗಿದ್ದುವು. ನೂರು ಅಡಿ ಉದ್ದವಾಗಿದ್ದ ಹಾವಾಗಲಿ ಹಾವು-ರಾಣಿಯಾಗಲಿ ಹೇಗಿದ್ದಿರಬಹುದು, ಊಹಿಸಿ ನೋಡು! ಲಂಡನ್ ಪಟ್ಟಣದ ವಸ್ತು-ಸಂಗ್ರಹಾಲಯದಲ್ಲಿ ಚಿಪ್ಪುಗಟ್ಟಿದ ಇಂತಹ ಪ್ರಾಣಿಗಳನ್ನು ನೋಡಿದುದು ನಿನಗೆ ನೆನಪಿದೆಯೇ?

ಆಮೇಲೆ, ಸ್ವಲ್ಪ ಹೆಚ್ಚು-ಕಡಿಮೆಯಾಗಿ ಈಗ ನಮ್ಮ ಕಣ್ಣಿಗೆ ಬೀಳುವಂತಹ ಮಾದರಿಯ ಪ್ರಾಣಿಗಳು ಹುಟ್ಟಿಬಂದುವು. ಇವುಗಳಿಗೆ ಮೊಲೆಯೂಡುವ ಪ್ರಾಣಿಗಳೆನ್ನುತ್ತಾರೆ. ಯಾಕೆಂದರೆ ಇವು ತಮ್ಮ ಮರಿಗಳಿಗೆ ಮೊಲೆ ಕೊಡುತ್ತವೆ. ಇವಾದರೂ ಈಗಿನವುಗಳಿಗಿಂತ ಬಹಳ ದೊಡ್ಡವಾಗಿದ್ದುವು. ಮನುಷ್ಯನನ್ನು ಬಹುಮಟ್ಟಿಗೆ ಹೋಲುವ ಮೊಲೆಯೂಡುವ ಪ್ರಾಣಿಯೆಂದರೆ ಮಂಗ. ಆದುದರಿಂದ ಮನುಷ್ಯನು ಮಂಗದ ವಂಶದವನೆಂದು ಜನರು ತಿಳಿಯುತ್ತಾರೆ. ಪ್ರತಿಯೊಂದು ಪ್ರಾಣಿ ಸಾವಕಾಶವಾಗಿ ತನ್ನ ಸುತ್ತು-ಮುತ್ತಲಿನ ಪರಿಸ್ಥಿತಿಗೆ ಹೊಂದಿಕೊಂಡಿರುತ್ತ ತನ್ನ ಸ್ಥಿತಿಯನ್ನು ಉತ್ತಮಗೊಳಿಸುತ್ತ ಇರುತ್ತದೆಂಬುದೇ ಇದರ ಅರ್ಥ. ಮನುಷ್ಯನಾದರೂ ಮೊದಲು ಸುಧಾರಿಸಿದ ಮಂಗನೇ ಆಗಿದ್ದನು. ಕಾಲ ಕಳೆದಂತೆ, ಅಥವಾ ಸೃಷ್ಟಿಯ ವ್ಯಾಪಾರ ಮುಂದೆ ಸಾಗಿದಂತೆ ಇವನು ಸುಧಾರಿಸುತ್ತ ನಡೆದನು. ಈಗ ತನ್ನನ್ನು ಮೀರುವವರು ಇಲ್ಲವೇ ಇಲ್ಲವೆಂದು ಇವನು ತಿಳಿದಿರುವನು! ಪಶುಗಳಿಗಿಂತ ಮತ್ತು ಇನ್ನುಳಿದ ಪ್ರಾಣಿ

ಗಳಿಗಿಂತ ತಾನು ತೀರ ಬೇರೆಯೆಂದು ಇವನು ಭಾವಿಸಿಕೊಳ್ಳುತ್ತಾನೆ. ಆದರೆ ನಾವೆಲ್ಲ ಮಂಗನ ಅಣ್ಣ-ತಮ್ಮಂದಿರೆಂದು ನೆನಪಿನಲ್ಲಿಡುವುದು ಒಳಿತು ! ಅಂತೆಯೇ ನಮ್ಮೊಳಗಿನ ಎಷ್ಟೋ ಜನರು ಮಂಗನಂತೆ ನಡವಳಿಸುತ್ತಿರುವುದನ್ನು ನಾವು ಕಾಣಬಹುದು.

---

೬

# ಮನುಷ್ಯನ ಉದಯ

ಜೀವವುಳ್ಳ ವಸ್ತುಗಳು ಭೂಮಿಯ ಮೇಲೆ ಸುಲಭಾಕೃತಿಯಿಂದ ಕಾಣಿಸಿಕೊಂಡದ್ದೂ ಲಕ್ಷಾವಧಿ ವರುಷಗಳಲ್ಲಿ ಮೆಲ್ಲ-ಮೆಲ್ಲನೆ ಬೆಳೆದು ಈಗಿನ ಸ್ಥಿತಿಗೆ ಬಂದದ್ದೂ ಹಿಂದಿನ ಪತ್ರದಲ್ಲಿ ನಾವು ನೋಡಿದೆವು. ಪ್ರಾಣಿಗಳ ಬೆಳವಣಿಗೆಯಲ್ಲಿ ಮನೋರಂಜಕವಾದ ಮತ್ತು ಮಹತ್ವವುಳ್ಳ ನಿಯಮವೊಂದನ್ನು ತಿಳಿದುಕೊಂಡೆವು. ಈ ನಿಯಮವೆಂದರೆ ಪ್ರಾಣಿಗಳು ತಮ್ಮ ಸುತ್ತು-ಮುತ್ತಿನ ಪರಿಸ್ಥಿತಿಗಳೊಂದಿಗೆ ತಮ್ಮನ್ನು ಹೊಂದಿಸಿಕೊಳ್ಳಲು ಯತ್ನಿಸುತ್ತಿರುವುವು. ಹೀಗೆ ಹವಣಿಸುವಾಗ ಅವು ಅನೇಕ ಹೊಸ ಹೊಸ ಗುಣಗಳನ್ನು ಮೈಗೂಡಿಸಿಕೊಂಡು, ಸುಧಾರಿಸಿದ ಮತ್ತು ಹೆಚ್ಚು ಹೆಚ್ಚು ತೊಡಕುಳ್ಳ ಪ್ರಾಣಿಗಳಾದುವು. ಈ ರೂಪಾಂತರ ಅಥವಾ ಬೆಳವಣಿಗೆಯನ್ನು ನಾವು ಬಗೆಬಗೆಯಿಂದ ಕಾಣಬಲ್ಲೆವು. ಉದಾಹರಣಾರ್ಥವಾಗಿ, ಮೊಟ್ಟ-ಮೊದಲು ಎಲುಬುಗಳಿಲ್ಲದ ಪ್ರಾಣಿಗಳಿದ್ದುವು. ಆದರೆ ಇವುಗಳಿಗೆ ಬಹಳ ಕಾಲ ಬದುಕುವುದಾಗಲಿಲ್ಲ. ಆದುದರಿಂದ ಇವು ಎಲುಬುಗಳನ್ನು ಬೆಳೆಯಿಸಿಕೊಂಡವು. ಇವು ಮೊಟ್ಟ-ಮೊದಲು ಬೆಳೆಯಿಸಿಕೊಂಡ ಎಲುಬು ಬೆನ್ನೆಲುಬು. ಎಲುಬುಳ್ಳ ಪ್ರಾಣಿಗಳು ಮತ್ತು ಎಲುಬಿಲ್ಲದ ಪ್ರಾಣಿಗಳು, ಹೀಗೆ ಪ್ರಾಣಿಗಳ ಎರಡು ಪಂಗಡಗಳು ನಮಗೆ ಕಾಣಿಸಿಕೊಂಡವು. ಅರ್ಥಾತ್, ನಿನಗೆ ನಾಲ್ಕೂ ನಿಟ್ಟಿನಲ್ಲಿ ಕಾಣುತ್ತಿರುವ ಮನುಷ್ಯರು ಮತ್ತು ಪಶುಗಳು ಎಲುಬುಳ್ಳ ಪ್ರಾಣಿಗಳು.

ಮುಂದೆ, ಮೀನುಗಳಂತಹ ಸಾದಾ ಪ್ರಾಣಿಗಳು ತತ್ತಿಗಳನ್ನಿಟ್ಟು ಅವುಗಳನ್ನು ಬಿಟ್ಟುಬಿಡುವುದು ತಿರಿಗಿ ನಿನಗೆ ಗೊತ್ತಾಗುವುದು. ಇಂತಹ

ಪ್ರಾಣಿಗಳು ಒಂದೇ ವೇಳೆಯಲ್ಲಿ ಸಾವಿರಾರು ತತ್ತಿಗಳನ್ನಿಡುವವು. ಆದರೆ ಈ ತತ್ತಿಗಳನ್ನು ಜೋಕೆ ಮಾಡುವುದಿಲ್ಲ. ತಾಯಿಗೆ ಮಕ್ಕಳ ಪರಿವೆಯೆ ಇಲ್ಲ! ಅದು ಬರಿಯ ತತ್ತಿಗಳನ್ನಿಡುವ ಕೆಲಸವನ್ನಷ್ಟೇ ಮಾಡಿ ಬಿಟ್ಟು ಹೋಗುವುದು. ತತ್ತಿಗಳಿದ್ದಲ್ಲಿ ಅದು ಎಂದಿಗೂ ತಿರುಗಿ ಬರುವುದಿಲ್ಲ. ಈ ತತ್ತಿಗಳನ್ನು ಜೋಕೆ ಮಾಡುವವರು ಯಾರೂ ಇಲ್ಲದುದರಿಂದ ಇವುಗಳೊಳಗಿನ ಎಷ್ಟೋ ತತ್ತಿಗಳು ಹಾಳಾಗುವವು. ಕೆಲವೇ ಮಾತ್ರ ಉಳಿದು ಬೆಳೆದು ಮೀನುಗಳಾಗುವವು. ದೊಡ್ಡ ಹಾನಿಯಲ್ಲವೆ ಇದು? ನಾವು ಮೇಲ್ತರದ ಪ್ರಾಣಿಗಳನ್ನು ಪರೀಕ್ಷಿಸುತ್ತ ಮುಂದೆ ಮುಂದೆ ಸಾಗಿದರೆ ಅವುಗಳ ತತ್ತಿಗಳು ಅಥವಾ ಮರಿಗಳು ಕಡಿಮೆ ಸಂಖ್ಯೆಯಲ್ಲಿದ್ದು ಅವುಗಳನ್ನು ಚೆನ್ನಾಗಿ ಕಾಪಾಡುತ್ತಿರುವುದು ಕಾಣಬರುತ್ತದೆ.

ಕೋಳಿ ತತ್ತಿಗಳನ್ನಿಡುವುದಲ್ಲದೆ ಅವುಗಳ ಮೇಲೆ ಕುಳಿತು ಕಾವು ಕೊಡುತ್ತಿರುತ್ತದೆ. ಮರಿಗಳು ಹುಟ್ಟಿದ ಮೇಲೆ ಕೆಲವು ಕಾಲದ ವರೆಗೆ ಅವುಗಳಿಗೆ ತಿನ್ನಿಸುತ್ತದೆ. ಅವು ದೊಡ್ಡವಾದ ಮೇಲೆ ಅವುಗಳ ಚಿಂತೆ ಮಾಡುವುದಿಲ್ಲ.

ನಾನು ಹಿಂದಿನ ಓಲೆಯಲ್ಲಿ ಹೇಳಿದ ಮೇಲ್ತರಗತಿಯ ಪ್ರಾಣಿಗಳಲ್ಲಿ ದೊಡ್ಡದೊಂದು ಮಾರ್ಪಾಟು ಉಂಟಾದುದು ಗೊತ್ತಾಗುತ್ತದೆ. ಈ ಪ್ರಾಣಿಗಳು ತತ್ತಿಗಳನ್ನಿಡುವುದಿಲ್ಲ. ಇವು ನಾಯಿ, ಬೆಕ್ಕು ಮೊದಲಾದ ಪ್ರಾಣಿಗಳಂತೆ ತತ್ತಿಗಳನ್ನು ತಮ್ಮ ಹೊಟ್ಟೆಯಲ್ಲಿಯೇ ಇಟ್ಟುಕೊಂಡು ತುಂಬ ಬೆಳೆದ ಮರಿಗಳನ್ನೇ ಈಯುತ್ತವೆ. ಆಮೇಲೆ ತಾಯಿ ತನ್ನ ಮರಿಗಳಿಗೆ ಮೊಲೆಯೂಡುತ್ತದೆ. ಇತರಂತೆ ಅದು ತನ್ನ ಮರಿಗಳನ್ನು ಚೆನ್ನಾಗಿ ಆರೈಕೆ ಮಾಡುತ್ತದೆ. ಇವುಗಳಲ್ಲಿಯೂ ಯಾವುದೊಂದು ಬಗೆಯಿಂದ ದೊಡ್ಡ ಹಾನಿಯಾದುದು ಕಂಡುಬರುತ್ತದೆ. ಇವುಗಳಲ್ಲಿ ಎಷ್ಟೋ ಮರಿಗಳು ಸತ್ತುಹೋಗುತ್ತವೆ. ಆದರೆ ಆನೆಯಂತಹ ದೊಡ್ಡ ಪ್ರಾಣಿ ಒಂದೇ ಮರಿಯನ್ನೀಯುತ್ತದೆ. ಮತ್ತು ಅದನ್ನು ಚೆನ್ನಾಗಿ ಜೋಕೆ ಮಾಡುತ್ತದೆ.

ಪ್ರಾಣಿಗಳು ವಿಕಾಸ ಹೊಂದಿದಂತೆಲ್ಲ ಅವು ತತ್ತಿಗಳನ್ನಿಡದೆ ತಮ್ಮಂತೆ ಇರುವ, ಪರಿಪೂರ್ಣವಾದ, ಆದರೆ ಸಣ್ಣ ಆಕಾರದ ಮರಿಗಳನ್ನೇ ಹೆರುತ್ತವೆ. ಮೇಲ್ತರಗತಿಯ ಪ್ರಾಣಿಗಳು ಸಾಮಾನ್ಯವಾಗಿ ಒಂದು ಬಸಿರಿನಲ್ಲಿ ಒಂದೇ

ಮರಿಯನ್ನೀಯುತ್ತವೆ. ತಮ್ಮ ಮರಿಗಳಿಗಾಗಿ ಇವು ಹಂಬಲಿಸುವುದು ನಿನಗೆ ಗೊತ್ತಾಗುತ್ತದೆ. ಮನುಷ್ಯನು ಎಲ್ಲಕ್ಕಿಂತ ಶ್ರೇಷ್ಠನಾದ ಪ್ರಾಣಿ. ಆದುದರಿಂದ ತಂದೆ-ತಾಯಿಗಳು ಮಕ್ಕಳನ್ನು ಪ್ರೀತಿಸುತ್ತಾರೆ; ಚೆನ್ನಾಗಿ ಸಾಕುತ್ತಾರೆ.

ಹೀಗೆ ಕೆಳಗಿನ ತರಗತಿಯ ಪ್ರಾಣಿಗಳು ವಿಕಾಸಹೊಂದುತ್ತ ಹೊಂದುತ್ತ ಮೊದಲಿನ ಮಾನವನಾಗಿಬಹುದು. ಬಹುಶಃ ನಾವು ಕಾಣುವ ಈಗಿನ ಮನುಷ್ಯರಂತೆ ಮುಂಚಿನ ಕಾಲದ ಮನುಷ್ಯರು ಇದ್ದಿರಲಾರರು. ಅವರು ಸಾಧಾರಣವಾಗಿ ಕೋತಿಯ ಹಾಗೆ ಬಾಳುತ್ತಿದ್ದ ಅರ್ಧ ಮನುಷ್ಯ, ಅರ್ಧ ಮಂಗನಂತೆ ಇದ್ದಿರಬಹುದು. ಜರ್ಮನಿಯ ಹಿಡೆಲ್ಬರ್ಗ್ ಎಂಬ ಪಟ್ಟಣದಲ್ಲಿ ಒಬ್ಬ ಪಂಡಿತನನ್ನು ನಾವು ಕಾಣಲು ಹೋದಾಗ ನೀನು ನಮ್ಮೊಂದಿಗೆ ಬಂದದ್ದು ನೆನಪಿದೆಯೆ? ಅವನು ನಮಗೆ ಅವಶೇಷಗಳಿಂದ ತುಂಬಿಕೊಂಡಿದ್ದ ಸಣ್ಣ ಪ್ರಾಚೀನ ವಸ್ತು-ಸಂಗ್ರಹಾಲಯವನ್ನೂ ಜೋಕೆಯಿಂದ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿಟ್ಟ ಒಂದು ಡವುಗೆಯನ್ನೂ ತೋರಿಸಿದನು. ಅದು ಪ್ರಾಚೀನ ಕಾಲದ ಒಬ್ಬ ಮನುಷ್ಯನ ಡವುಗೆಯಾಗಿರಬಹುದೆಂಬ ತಿಳಿವಳಿಕೆ ಇದೆ. ಈ ಡವುಗೆಯ ಮನುಷ್ಯನಿಗೆ ನಾವು "ಹಿಡೆಲ್ಬರ್ಗ್ ಮನುಷ್ಯ" ನೆಂದು ಕರೆಯುತ್ತೇವೆ. ಯಾಕೆಂದರೆ ಈ ಡವುಗೆ ಹಿಡೆಲ್ಬರ್ಗಿನ ಹತ್ತಿರ ನೆಲದಲ್ಲಿ ಹೂಳಿತ್ತು. ಆ ಕಾಲದಲ್ಲಿ ಹಿಡೆಲ್ಬರ್ಗಾಗಲಿ ಇನ್ನಾವ ಪಟ್ಟಣವಾಗಲಿ ಇದ್ದಿಲ್ಲ.

ಪ್ರಾಚೀನ ಕಾಲದಲ್ಲಿ ಮನುಷ್ಯರು ಒಂದೇ ನೆಲೆಯಲ್ಲಿ ನಿಲ್ಲದೆ ಅಲೆದಾಡುತ್ತಿದ್ದರು. ಆಗ ಚಳಿ ಬಹಳವಿತ್ತು. ಆ ಕಾಲಕ್ಕೆ ಹಿಮ-ಯುಗವೆಂದು ಹೆಸರು. ಯಾಕೆಂದರೆ ಆಗ ಮಂಜು ವೆಗ್ಗಳವಾಗಿತ್ತು. ಈಗ ಉತ್ತರ-ಧ್ರುವ ಪ್ರದೇಶದಲ್ಲಿದ್ದಂತಹ ಮಂಜುಗುಡ್ಡಗಳು ಆಗ ಇಂಗ್ಲಂಡು ಮತ್ತು ಜರ್ಮನಿಯ ವರೆಗೆ ಹರಡಿದ್ದುವು. ಆಗ ಮನುಷ್ಯರು ಬದುಕಿರುವುದು ಬಹಳ ಕಷ್ಟವಾಗಿದ್ದಿರಬೇಕು. ಹಿಮಗಿರಿಗಳು ಇಲ್ಲದಲ್ಲಿ ಮಾತ್ರ ಜನರು ಇರಬಲ್ಲವರಾಗಿದ್ದರು. ಆಗಿನ ಕಾಲದಲ್ಲಿ ಭೂ-ಮಧ್ಯಸಾಗರವಂತೂ ಇರಲೇ ಇಲ್ಲವೆಂದೂ ಆ ಸ್ಥಳದಲ್ಲಿ ಒಂದೆರಡು ಸರೋವರಗಳು ಮಾತ್ರ ಇದ್ದವೆಂದೂ ವೈಜ್ಞಾನಿಕರು ಹೇಳುತ್ತಾರೆ. ಕೆಂಪು ಸಮುದ್ರವೂ ಆಗ ಇದ್ದಿಲ್ಲ. ಇದೆಲ್ಲವೂ ನೆಲವೇ ಆಗಿತ್ತು. ಭಾರತ ದೇಶದ ಬಹು-

ಭಾಗ ಬಹುಶಃ ಒಂದು ನಡು-ಗಡ್ಡೆಯಾಗಿರಬಹುದು. ನಮ್ಮ ಪ್ರಾಂತದ ಕೆಲ-ಭಾಗ ಮತ್ತು ಪಂಜಾಬು ಕಡಲಾಗಿತ್ತು ನಡುವೆ ಕಡಲು ಬಂದು ದಕ್ಷಿಣ ಹಿಂದುಸ್ತಾನವೂ ಮಧ್ಯ ಹಿಂದುಸ್ತಾನವೂ ಹಿಮಾಲಯದಿಂದ ಬೇರೆಯಾದುದನ್ನು ಊಹಿಸು. ಆಗ ನೀನು ಮಸೂರಿಗೆ ಹಡಗಿನಿಂದ ಹೋಗಬೇಕಾಗುತ್ತಿತ್ತು.

ಮನುಷ್ಯನು ಮೊದಲು ಹುಟ್ಟಿ ಬಂದಾಗ ಅವನ ಸುತ್ತು-ಮುತ್ತು ಅನೇಕ ದೊಡ್ಡ ದೊಡ್ಡ ಪಶುಗಳೇ ಇದ್ದಿರಬೇಕು ಅವನು ಇವುಗಳಿಗೆ ಅಂಜುತ್ತ ಕಾಲಹರಣ ಮಾಡಬೇಕು. ಈಗ ಮನುಷ್ಯನು ಜಗತ್ತಿನ ಒಡೆಯನಾಗಿರುವನು. ಅವನು ಪಶುಗಳನ್ನು ತನ್ನ ಮನಬಂದಂತೆ ನಡೆಯಿಸಿಕೊಳ್ಳುತ್ತಿರುವನು. ಕುದುರೆ, ಆಕಳು, ಆನೆ, ನಾಯಿ, ಬೆಕ್ಕುಗಳಂತಹ ಕೆಲವು ಪ್ರಾಣಿಗಳನ್ನು ಅವನು ಸಾಕಿ ಸಲಹುತ್ತಾನೆ ಕೆಲವನ್ನು ತಿನ್ನುತ್ತಾನೆ. ಹುಲಿ ಸಿಂಹಗಳಂತಹ ಕೆಲವು ಪ್ರಾಣಿಗಳನ್ನು ತನ್ನ ಸಂತೋಷಕ್ಕಾಗಿ ಬೇಟೆಯಾಡುತ್ತಾನೆ. ಆದರೆ ಆಗಿನ ಕಾಲದಲ್ಲಿ ಇವನು ಒಡೆಯನಾಗಿದ್ದಿಲ್ಲ. ತಾನೇ ಬೇಟೆಯ ಪ್ರಾಣಿಯಾಗಿದ್ದು ಕಾಡು ಮೃಗಗಳಿಂದ ತನ್ನನ್ನು ಕಾಪಾಡಿಕೊಳ್ಳಬೇಕಾಗುತ್ತಿತ್ತು. ಬರ ಬರುತ್ತ ಮನುಷ್ಯನು ಹಾಗೂ ಹೀಗೂ ಏಳಿಗೆ ಹೊಂದುತ್ತ ಬಲವಂತನಾಗುತ್ತ ಕಡೆಗೆ ಪಶುಗಳಿಗಿಂತ ಹೆಚ್ಚು ಶಕ್ತಿಶಾಲಿಯಾದನು. ಅವನಿಂದ ಇದೆಲ್ಲ ಹೇಗಾಯಿತು? ಮೈ ಕಸುವಿನಿಂದಲ್ಲ; ಯಾಕೆಂದರೆ ಮನುಷ್ಯನಿಗಿಂತ ಆನೆ ಬಹಳ ಕಸುವುಳ್ಳದ್ದು. ಇದೆಲ್ಲ ಆದುದು ಬುದ್ಧಿಯ ಬಲದಿಂದ, ಮೆದುಳಿನ ಶಕ್ತಿಯಿಂದ.

ಪ್ರಾಚೀನಕಾಲದಿಂದ ಈ ಹೊತ್ತಿನ ವರೆಗೆ ಮನುಷ್ಯನ ಬುದ್ಧಿಯ ಈ ಬೆಳವಣಿಗೆಯನ್ನು ನಾವು ಗೊತ್ತುಹಚ್ಚಬಲ್ಲೆವು. ಮನುಷ್ಯನು ಉಳಿದ ಪ್ರಾಣಿಗಳಿಂದ ಬೇರೆಯಾಗಿರುವದು ಈ ಬುದ್ಧಿಯ ಬಲದಿಂದ, ಎಂಬಲ್ಲಿ ಸಂದೇಹವಿಲ್ಲ. ಪಶುವಿನಲ್ಲಿಯೂ ಬುದ್ಧಿ ಇಲ್ಲದ ಮನುಷ್ಯನಲ್ಲಿಯೂ ಏನೂ ಭೇದವಿಲ್ಲ.

ಬೆಂಕಿಯ ಶೋಧನೆಯೆ ಮನುಷ್ಯನ ಮೊದಲನೆ ಹಿರಿದಾದ ಶೋಧನೆಯಾಗಿರಬಹುದು. ನಾವು ಈಗ ಬೆಂಕಿಯ ಕಡ್ಡಿಯಿಂದ ದೀಪ ಹೊತ್ತಿಸುತ್ತೇವೆ. ಈ ದೀಪದ ಕಡ್ಡಿಗಳು ತೀರ ಇತ್ತೀಚೆಯ ಪದಾರ್ಥಗಳು. ಹಿಂದಿನ ಕಾಲದಲ್ಲಿ ಬೆಣಚುಗಲ್ಲು (Flint) ಗಳನ್ನು ಕಿಡಿ ಏಳುವ ವರೆಗೆ

ಒಂದಕ್ಕೊಂದು ತಿಕ್ಕಿ ಬೆಂಕಿಯನ್ನು ಮಾಡುತ್ತಿದ್ದರು. ಈ ಕಿಡಿಯಿಂದ ಒಣಗಿದ ಹುಲ್ಲಿಗೆ ಇಲ್ಲವೆ ಒಣಗಿದ ಇನ್ನಾವುದಕ್ಕಾದರೂ ಬೆಂಕಿ ಹಚ್ಚುತ್ತಿದ್ದರು. ಬೆಣಚುಗಲ್ಲುಗಳಾಗಲಿ, ಬೇರೆ ಪದಾರ್ಥಗಳಾಗಲಿ, ತನ್ನಿಂದ ತಾನೇ ಹೊಸೆದಾಡಿ ಕಾಡಿನಲ್ಲಿ ಬೆಂಕಿ ಏಳುತ್ತಿತ್ತು. ಇದರಿಂದ ಏನನ್ನಾದರೂ ಕಲಿತುಕೊಳ್ಳುವಷ್ಟು ಬುದ್ಧಿ ಪಶುಗಳಲ್ಲಿರಲಿಲ್ಲ. ಆದರೆ ಮನುಷ್ಯನು ಹೆಚ್ಚು ಬುದ್ಧಿವಂತನು. ಬೆಂಕಿಯ ಉಪಯೋಗವನ್ನು ಇವನು ಕಂಡು ಹಿಡಿದನು. ಅದು ಚಳಿಗಾಲದಲ್ಲಿ ಇವನನ್ನು ಬೆಚ್ಚಗೆ ಮಾಡುತಿತ್ತು ಇವನ ಹಗೆಯಾಗಿದ್ದ ದೊಡ್ಡ ಪಶುವನ್ನು ಹೆದರಿಸಿ ಓಡಿಸುತಿತ್ತು. ಹೀಗೆ ಬೆಂಕಿ ಹತ್ತಿದಾಗ ಯಾವಾಗಲೂ ಗಂಡಸರೂ ಹೆಂಗಸರೂ ಒಣಗಿದ ಎಲೆಗಳನ್ನು ಅದರಲ್ಲಿ ಹಾಕಿ ಅದನ್ನು ಕಾಯ್ದಿಡಲು ಹವಣಿಸುತ್ತಿದ್ದರು. ಬೆಂಕಿ ಆರಿಹೋಗುವುದನ್ನು ಇವರು ಇಚ್ಛಿಸುತಿದ್ದಿಲ್ಲ. ಬೆಣಚುಗಲ್ಲುಗಳನ್ನು ಒಂದಕ್ಕೊಂದು ಹೊಡೆದು ಬೆಂಕಿಯನ್ನು ಹೊತ್ತಿಸಬಲ್ಲೆವೆಂಬುದನ್ನು ಇವರು ಮೆಲ್ಲ-ಮೆಲ್ಲನೆ ಕಂಡುಕೊಂಡರು. ಇದೇ ಇವರ ದೊಡ್ಡ ಶೋಧನೆ. ಇದರಿಂದ ಅನ್ಯ ಪ್ರಾಣಿಗಳ ಮೇಲೆ ಇವರಿಗೆ ಸ್ವಲ್ಪ ಒಡೆತನ ಬಂದಿತು. ಜಗತ್ತನ್ನು ಕೈವಶ ಮಾಡಿಕೊಳ್ಳುವ ಹಾದಿಯಲ್ಲಿ ಮಾನವನು ಆಗ ವೇಗವಾಗಿ ಮುಂದಕ್ಕೆ ಸಾಗಿದನು.

---

೭

## ಮೊಟ್ಟಮೊದಲಿನ ಮನುಷ್ಯರು

ಮನುಷ್ಯ ಮತ್ತು ಇನ್ನುಳಿದ ಪ್ರಾಣಿಗಳಲ್ಲಿ ಅಂತರವುಂಟಾಗಲು ಮುಖ್ಯವಾಗಿ ಮನುಷ್ಯನ ಬುದ್ಧಿಯೇ ಕಾರಣ. ಇದನ್ನು ನಾವು ಹಿಂದಿನ ಓಲೆಯಿಂದ ನೋಡಿಕೊಂಡೆವು. ಮನುಷ್ಯನು ಅದ್ಭುತವಾದ ಪಶುಗಳಿಗಿಂತ ಹೆಚ್ಚು ಬಲಿಷ್ಠನಾದುದೂ ಚುರುಕಾಗಿದ್ದುದೂ ಈ ಬುದ್ಧಿಯೊಂದರಿಂದಲೇ. ಇದೊಂದು ಇಲ್ಲದಿದ್ದರೆ ಅವು ಮನುಷ್ಯನನ್ನು ನಾಶಮಾಡಿಬಿಡುತ್ತಿದ್ದುವು. ಮನುಷ್ಯನ ಬುದ್ಧಿ ಬೆಳೆದಂತೆ ಅವನ ಆಳ್ತನವೂ ಬೆಳೆಯತೊಡಗಿತು. ತನ್ನ ಹಗೆಗಳನ್ನು ಎದುರಿಸಿ ಕಾದಲು, ಪ್ರಾರಂಭದಲ್ಲಿ ಅವನಲ್ಲಿ

ಬೇಕಾದ ಆಯುಧಗಳಿದ್ದಿಲ್ಲ. ಅವನು ಪಶುಗಳ ಕಡೆಗೆ ಕಲ್ಲುಗಳನ್ನು ಎಸೆಯುತ್ತಿದ್ದನು ಮಾತ್ರ. ಆಮೇಲೆ ಅವನು ಕಲ್ಲುಗಳಿಂದ ಕೊಡಲಿ, ಭಲ್ಲೆ, ದಬ್ಬಣ ಮುಂತಾದ ಅನೇಕ ಪದಾರ್ಥಗಳನ್ನು ಮಾಡತೊಡಗಿದನು. ಸೌಥ್ ಕೆನ್ಸಿಂಗ್‌ಟನ್ನಿನ ಮತ್ತು ಜಿನೇವಾ ಪಟ್ಟಣದ ವಸ್ತುಸಂಗ್ರಹಾಲಯದಲ್ಲಿ ಇಂತಹ ಕಲ್ಲಿನ ಆಯುಧಗಳನ್ನು ನಾವು ನೋಡಿರುವೆವು.

ಹಿಂದಿನ ಓಲೆಯಲ್ಲಿ ನಾನು ಹೇಳಿದ ಹಿಮಯುಗ ಮೆಲ್ಲಮೆಲ್ಲನೆ ಮುಗಿದು ಮಧ್ಯ ಯುರೋಪು ಮತ್ತು ಏಷಿಯದಲ್ಲಿಯ ಹಿಮದ ಬೆಟ್ಟಗಳು ಮಾಯವಾದುವು. ಬೆಚ್ಚಗಾಗುತ್ತ ನಡೆದಂತೆ ಮನುಷ್ಯರು ಹರಡಿದರು.

ಆಗಿನ ಕಾಲದಲ್ಲಿ ಮನೆಗಳಾಗಲಿ ಕಟ್ಟಡಗಳಾಗಲಿ ಇದ್ದಿಲ್ಲ. ಜನರು ಗವಿಗಳಲ್ಲಿರುತ್ತಿದ್ದರು. ಭೂಮಿಯ ಸಾಗುವಳಿ, ಎಂದರೆ ಹೊಲಗಳಲ್ಲಿ ದುಡಿಯುವುದು ಆಗ ಇದ್ದಿಲ್ಲ. ಮನುಷ್ಯರು ಹಣ್ಣು-ಹಂಪಲು ಇಲ್ಲವೆ ತಾವು ಕೊಂದ ಪ್ರಾಣಿಗಳನ್ನು ತಿನ್ನುತ್ತಿದ್ದರು. ಉಣ್ಣಲು ರೊಟ್ಟಿ ಬೋನ ಯಾವುದೂ ಅವರಲ್ಲಿರಲಿಲ್ಲ. ಯಾಕೆಂದರೆ ಅವರು ಹೊಲಗಳಲ್ಲಿ ಬೆಳೆಯನ್ನು ಬೆಳೆಯುತ್ತಿದ್ದಿಲ್ಲ. ಅಡುಗೆ ಮಾಡಲು ಅವರಿಗೆ ತಿಳಿದಿರಲಿಲ್ಲ. ಆದರೆ ತಮಗೆ ದೊರೆತ ಮಾಂಸವನ್ನು ಅವರು ದೊಡ್ಡ ಉರಿಯಲ್ಲಿ ಬೇಯಿಸುತಿದ್ದಿರಬಹುದು. ಅಡುಗೆ ಮಾಡಲು ಅವರಲ್ಲಿ ಗಡಿಗೆ-ಮಡಕೆಗಳೂ ತಪ್ಪೇಲಿ ತವೆಗಳೂ ಇದ್ದಿಲ್ಲ.

ಇಲ್ಲಿ ಹೇಳಬೇಕಾದ ಕುತೂಹಲಕರವಾದ ಸಂಗತಿಯೊಂದಿದೆ. ಈ ಕಾಡುಜನರಿಗೆ ಚಿತ್ರ ತೆಗೆಯಲು ಗೊತ್ತಿತ್ತು. ಆದರೆ ಅವರಲ್ಲಿ ಹಾಳೆ, ಲೆಕ್ಕಣಿಕೆ, ಸೀಸಕಡ್ಡಿ, ಇಲ್ಲವೆ ಕುಂಚುಗಳಿದ್ದಿಲ್ಲ. ಅವರಲ್ಲಿ ಕಲ್ಲಿನ ಬರಿಯ ದಬ್ಬಣಗಳು ಮತ್ತು ಚೂಪಾದ ವಸ್ತುಗಳಿದ್ದವು. ಇಂತಹ ಕಲ್ಲಿನ ವಸ್ತುಗಳಿಂದ ಅವರು ಗೋಡೆಯ ಮೇಲೆ ಕೊರೆಯುತ್ತಿದ್ದರು; ಪಶುಗಳ ಚಿತ್ರವನ್ನು ತೆಗೆಯುತ್ತಿದ್ದರು. ಅವರು ತೆಗೆದ ಚಿತ್ರಗಳು ಬಹಳ ಸುಂದರವಾಗಿರುವವು. ಆದರೆ ಅವೆಲ್ಲ ಬಹುತರವಾಗಿ ರೇಖೆಗಳು ಮಾತ್ರ. ರೇಖೆಗಳನ್ನು ಚಿತ್ರಿಸುವುದು ಹೆಚ್ಚು ಸುಲಭ. ಚಿಕ್ಕಮಕ್ಕಳು ಸಾಮಾನ್ಯವಾಗಿ ಚಿತ್ರ ಬರೆಯುವುದು ಹೀಗೆಯೇ ಎಂಬುದನ್ನು ನೀನು ಬಲ್ಲೆಯಷ್ಟೆ? ಆಗ ಗವಿಗಳಲ್ಲಿ ಕತ್ತಲಾಗಿದ್ದಿರಬಹುದು. ಆದುದರಿಂದ ಅವರು ಯಾವುದೋ ಒಂದು ತರದ ದೀಪವನ್ನು ಹಚ್ಚುತ್ತಿದ್ದರು.

ನಾವು ಹೇಳಿರುವ ಈ ಮನುಷ್ಯರಿಗೆ ಪ್ಯಾಲಿಯೊಲಿಥಿಕ್ ಮನುಷ್ಯರು, ಅಥವಾ ಹಳೆಯ ಕಲ್ಲಿನ ಕಾಲದ ಜನರೆಂದು ಹೆಸರಿರುವುದು. ಆ ಕಾಲಕ್ಕೆ ಕಲ್ಲಿನ ಯುಗವೆಂದು ಕರೆಯುವರು. ಏಕೆಂದರೆ, ಮನುಷ್ಯರು ಆಗ ತಮ್ಮ ಎಲ್ಲ ಉಪಕರಣಗಳನ್ನು ಕಲ್ಲಿನಿಂದ ಮಾಡುತ್ತಿದ್ದರು. ಧಾತುಗಳ ಬಳಕೆಯನ್ನು ಅವರು ಅರಿತಿರಲಿಲ್ಲ. ಈಗಿನ ಕಾಲದಲ್ಲಿ ಬಹುತರವಾಗಿ ನಮ್ಮ ಎಲ್ಲ ವಸ್ತುಗಳು ಧಾತುಗಳಿಂದ, ವಿಶೇಷವಾಗಿ ಕಬ್ಬಿಣದಿಂದ ಸಿದ್ಧವಾಗುತ್ತವೆ. ಆದರೆ ಆ ಕಾಲದಲ್ಲಿ ಕಬ್ಬಿಣ ಮತ್ತು ಕಂಚನ್ನು ಕಂಡುಹಿಡಿದಿರಲಿಲ್ಲ. ಆದುದರಿಂದ, ಬಳಸಲು ಸುಲಭವಲ್ಲದ ಕಲ್ಲನ್ನೇ ಅವರು ಉಪಯೋಗಿಸುತ್ತಿದ್ದರು. ಆದರಿಂದ ಕೆಲಸವನ್ನು ಸಾಗಿಸುವುದು ದುಸ್ತರವಾಗಿತ್ತು.

ಕಲ್ಲಿನ ಹಳೆಯ ಯುಗ ಮುಗಿಯುವ ಮೊದಲೆ ಜಗತ್ತಿನ ವಾಯುಗುಣ ಬಹಳ ಮಾರ್ಪಟ್ಟಿತು. ಹೆಚ್ಚು ಬೆಚ್ಚಗೂ ಆಯಿತು. ಮಂಜು-ಗಡ್ಡೆಗಳು ಉತ್ತರ ಮಹಾಸಾಗರದ ಕಡೆಗೆ ಬಹಳ ದೂರ ಹಿಂದೆ ಸರಿದುವು. ಮಧ್ಯ ಏಷಿಯ ಮತ್ತು ಯುರೋಪುಗಳಲ್ಲಿ ದೊಡ್ಡ ದೊಡ್ಡ ಕಾಡುಗಳು ತಲೆದೋರಿದುವು. ಈ ಕಾಡುಗಳಲ್ಲಿ ಹೊಸ ಜಾತಿಯ ಮನುಷ್ಯರು ಇರುತ್ತಿದ್ದುದು ನಮಗೆ ತಿಳಿದುಬರುತ್ತದೆ. ಈಗ ನಾನು ಹೇಳಿರುವ ಪ್ಯಾಲಿಯೊಲಿಥಿಕ್ ಮನುಷ್ಯರಿಗಿಂತ ಈ ಜನರು ಅನೇಕ ತರಹಗಳಿಂದ ಚುರುಕು ಬುದ್ಧಿಯುಳ್ಳವರಾಗಿದ್ದರು. ಹೀಗಿದ್ದರೂ ಇವರು ತಮ್ಮ ಉಪಕರಣಗಳನ್ನು ಕಲ್ಲಿನಿಂದಲೇ ಮಾಡಿಕೊಳ್ಳುತ್ತಿದ್ದರು. ಆದುದರಿಂದ ಇವರೂ ಪಾಷಾಣ ಯುಗಕ್ಕೆ ಸೇರಿದವರೇ. ಆದರೆ ಈ ಜನರ ಯುಗ ಅನಂತರದ್ದು. ಈ ಕಾಲದ ಜನರನ್ನು ನಿಯೋಲಿಥಿಕ್, ಎಂದರೆ, ಕಲ್ಲಿನ ಹೊಸ ಯುಗದ ಜನರೆಂದು ಕರೆಯುತ್ತಾರೆ.

ಆಗ ಮನುಷ್ಯನ ಬೆಳವಣಿಗೆ ಬಹಳವಾಗಿತ್ತೆಂದು ನಾವು ಈ ಜನರನ್ನು ಪರೀಕ್ಷಿಸುವುದರಿಂದ ಕಂಡುಬರುತ್ತದೆ. ಮನುಷ್ಯನ ಬುದ್ಧಿ ಅವನನ್ನು ಬಹು ಬೇಗನೆ ಮುಂದುವರಿಸಿದ್ದು ಮನುಷ್ಯರನ್ನು ಉಳಿದ ಪಶುಗಳಿಗೆ ಹೋಲಿಸುವುದರಿಂದ ಗೊತ್ತಾಗುತ್ತದೆ. ಕಲ್ಲಿನ ಹೊಸ ಯುಗದ ಈ ಜನರು ಭೂಮಿಯನ್ನು ಸಾಗುಮಾಡುವುದನ್ನು ಬೆಳೆಸತೊಡಗಿದರು. ಭೂಮಿಯನ್ನು ಸಾಗುಮಾಡಿ ತಮಗೆ ಬೇಕಾದ ಆಹಾರವನ್ನು ಕಂಡುಹಿಡಿದರು. ಅವರ ಮಟ್ಟಿಗೆ ಇದೇ ಮಹಾಕಾರ್ಯವೇ ಸರಿ. ಕಾಡುಮಿಗಗಳನ್ನು ದಿನವೆಲ್ಲವೂ

ಬೇಟೆಯಾಡುವುದಕ್ಕಿಂತ ಬಹಳ ಸುಲಭವಾಗಿ ಈಗ ಅವರು ತಮ್ಮ ಅನ್ನ ವನ್ನು ಗಳಿಸಿಕೊಳ್ಳುವಂತಾಯಿತು. ದಣಿವಾರಿಸಿಕೊಳ್ಳುವುದಕ್ಕೂ, ವಿಚಾರ ಮಾಡಲಿಕ್ಕೂ ಅವರಿಗೆ ಹೆಚ್ಚು ಅನುವು ದೊರೆಯಿತು. ಬಿಡುವು ಹೆಚ್ಚು ದೊರೆ ತಂತೆ ಅವರು ಹೊಸ ಹೊಸ ವಸ್ತುಗಳನ್ನು ಮತ್ತು ಹೊಸ ಹೊಸ ಬಗೆಗಳನ್ನು ಕಂಡುಕೊಳ್ಳುವುದರಲ್ಲಿ ಬಹಳ ಮುಂದುವರಿದರು. ಮಣ್ಣಿನ ಗಡಿಗೆ ಮಡಿಕೆ ಗಳನ್ನು ಮಾಡುವುದನ್ನು ಅವರು ಹುಡುಕಿದರು. ಇದರಿಂದ ಆಹಾರವನ್ನು ಬೇಯಿಸಲು ಹೆಚ್ಚು ಅನುಕೂಲವಾಯಿತು. ಇವರು ಮಾಡಿದ ಕಲ್ಲಿನ ಸಲಕರಣೆಗಳು ಬಹಳ ಚೆಲುವಾಗಿಯೂ ನುಣುಪಾಗಿಯೂ ಇದ್ದುವು. ಪ್ರಾಣಿಗಳನ್ನು, ಎಂದರೆ, ಆಕಳು, ನಾಯಿ, ಕುರಿ, ಹೋತಗಳನ್ನು ಪಳಗಿ ಸುವುದನ್ನು ಇವರು ಕಲಿತರು. ನೇಯುವುದನ್ನೂ ಇವರು ಕಲಿತರು.

ಇವರು ಮನೆಗಳಲ್ಲಿ ಇಲ್ಲವೆ ಗುಡಿಸಲುಗಳಲ್ಲಿ ಇರತೊಡಗಿದರು. ಈ ಗುಡಿಸಲುಗಳು ಕೆರೆಗಳ ನಡುವೆ ಹಾಕಲ್ಪಡುತ್ತಿದ್ದುವು. ಏಕೆಂದರೆ ಅಲ್ಲಿ ಕಾಡು ಮಿಗಗಳಾಗಲಿ ಬೇರೆ ಮನುಷ್ಯರಾಗಲಿ ಸುಲಭವಾಗಿ ಇವರ ಮೇಲೆ ದಾಳಿಡುವಂತಿರಲಿಲ್ಲ. ಈ ಕಾರಣದಿಂದ ಈ ಜನರಿಗೆ ಸರೋವರ ನಿವಾಸಿ ಗಳೆಂದು ಹೆಸರಾಯಿತು.

ಈ ಜನರನ್ನು ಕುರಿತು ನಾವು ಇಷ್ಟೊಂದನ್ನು ಹೇಗೆ ತಿಳಿದುಕೊಂಡೆ ವೆಂದು ನಿನಗೆ ಅಚ್ಚರಿಯಾಗಬಹುದು. ಇವರು ಪುಸ್ತಕಗಳನ್ನಂತೂ ಬರೆ ದಿಟ್ಟಿರಲಿಲ್ಲ. ಆದರೆ ಈ ಜನರ ಚರಿತ್ರೆಯನ್ನು ನಾವು ಓದಿಕೊಳ್ಳುವುದು ಸೃಷ್ಟಿಯ ವಿಶಾಲವಾದ ಪುಸ್ತಕದಲ್ಲಿ. ಇದೇ ನಮ್ಮ ಪುಸ್ತಕವೆಂದು ನಾನು ನಿನಗೆ ಮೊದಲೇ ಹೇಳಿರುವೆನು. ಇದನ್ನು ಓದುವುದು ಅಷ್ಟು ಸುಲಭವಲ್ಲ. ಇದಕ್ಕಾಗಿ ಬಹಳ ತಾಳ್ಮೆ ಬೇಕಾಗುವುದು. ಈ ಪುಸ್ತಕವನ್ನು ಓದುವ ಹವಣಿಕೆಯಲ್ಲಿ ಎಷ್ಟೋ ಜನರು ತಮ್ಮ ಆಯುಷ್ಯವನ್ನೆ ಕಳೆದಿರುವರು. ಹಿಂದಿನ ಕಾಲದ ಅಗೆದು ತೆಗೆದ ಎಷ್ಟೋ ಅವಶೇಷಗಳನ್ನು ಇವರು ಕಲೆ ಹಾಕಿರುವರು. ದೊಡ್ಡ ದೊಡ್ಡ ವಸ್ತುಸಂಗ್ರಹಾಲಯಗಳಲ್ಲಿ ಈ ಅವಶೇಷ ಗಳನ್ನು ಕೂಡಿಟ್ಟಿರುವರು. ಈ ಕಲ್ಲಿನ ಹೊಸ ಯುಗದ ಜನರು ಮಾಡಿದ ನುಣುಪಾದ ಕೊಡಲಿಗಳೂ, ಗಡಿಗೆಗಳೂ, ಕಲ್ಲಿನ ಬಾಣ ಮತ್ತು ದಬ್ಬಣ ಗಳೂ ನಮಗೆ ನೋಡಲು ದೊರೆಯುತ್ತವೆ. ನೀನು ಇಂತಹ ಎಷ್ಟೋ ವಸ್ತುಗಳನ್ನು ನೋಡಿರುವೆ. ಈಗ ಇವುಗಳನ್ನು ಮರೆತಿರಬಹುದು.

ಇನ್ನೊಮ್ಮೆ ನೋಡಿದರೆ ಇವುಗಳನ್ನು ಚೆನ್ನಾಗಿ ತಿಳಿದುಕೊಳ್ಳುವೆ.

ಜಿನೇವಾ ವಸ್ತುಸಂಗ್ರಹಾಲಯದಲ್ಲಿ ಒಳ್ಳೇ ಮಾದರಿಯ ಒಂದು ಕೊಳವಿದ್ದುದು ನನಗೆ ನೆನಪಿದೆ. ಕೊಳದಲ್ಲಿ ಕಟ್ಟಿಗೆಯ ಕಂಬಗಳನ್ನು ನೆಟ್ಟು ಅವುಗಳ ಮೇಲೆ ಕಟ್ಟಿಗೆಯ ಗದ್ದಿಗೆಯನ್ನು ಹಾಕಲಾಗಿತ್ತು. ಈ ಕಟ್ಟಿಗೆಯ ಗದ್ದಿಗೆಯ ಮೇಲೆ ಗುಡಿಸಲುಗಳನ್ನು ಹಾಕಿದ್ದರು. ಒಂದು ಸಣ್ಣ ಸೇತುವೆಯಿಂದ ಇದೆಲ್ಲವನ್ನೂ ಭೂಮಿಗೆ ಕೂಡಿಸಿಬಿಟ್ಟಿದ್ದರು

ಹೊಸ ಯುಗದ ಈ ಜನರು ಪಶುಗಳ ತೊಗಲಿನಿಂದ ತಮ್ಮ ಮೈಯನ್ನು ಮುಚ್ಚಿಕೊಳ್ಳುತ್ತಿದ್ದರು. ಕೆಲವೊಮ್ಮೆ ನಾರುಬಟ್ಟೆಯನ್ನು ಉಡುತ್ತಿದ್ದರು. ನಾರು ಎಂದರೆ ಒಂದು ತರದ ಗಿಡದ ಉದ್ದವಾದ ಎಳೆಯುಳ್ಳ, ಬಟ್ಟೆ ಮಾಡಲು ಬರುವ ಒಂದು ತೊಗಟೆ ಈಗ ನಾರುಬಟ್ಟೆಯನ್ನು ತೊಗಟೆಯಿಂದ ಮಾಡುತ್ತಾರೆ. ಆದರೆ ಆ ಕಾಲದ ನಾರುಬಟ್ಟೆ ಬಹಳ ಒರಟಾಗಿದ್ದಿರಬಹುದು.

ಈ ಜನರು ಏಳಿಗೆ ಹೊಂದುತ್ತ ನಡೆದರು. ತಾಮ್ರ ಮತ್ತು ಕಂಚಿನ ಸಾಮಾನುಗಳನ್ನು ಇವರು ಮಾಡತೊಡಗಿದರು. ತಾಮ್ರ ಮತ್ತು ತವರು ಕೂಡಿ ಕಂಚಾಗುವುದು ನಿನಗೆ ಗೊತ್ತು. ತಾಮ್ರ ತವರುಗಳಿಗಿಂತ ಕಂಚು ಬಿರುಸಾಗಿರುತ್ತದೆ. ಬಂಗಾರವನ್ನೂ ಇವರು ಬಳಸುತ್ತಿದ್ದರು; ಮತ್ತು ಅದರಿಂದ ಒಡವೆಗಳನ್ನು ಮಾಡುವಷ್ಟು ಚತುರರಾಗಿದ್ದರು.

ಈ ಜನರು ಸುಮಾರು ಹತ್ತು ಸಾವಿರ ವರುಷಗಳಷ್ಟು ಹಿಂದೆ ಇದ್ದಿರಬಹುದು. ನಮಗೆ ಸರಿಯಾದ ಕಾಲ ಮತ್ತು ದಿನಗಳು ಗೊತ್ತಾಗುವುದಿಲ್ಲ. ಇದೆಲ್ಲ ಊಹೆ. ಇಲ್ಲಿಯ ವರೆಗೆ ನಾವು ಮಾತನಾಡಿಕೊಂಡದ್ದು ಲಕ್ಷಾನವಧಿ ವರುಷಗಳ ಮಾತೆಂದು ನಿನಗೆ ತಿಳಿಯದೆ ಇರಲಾರದು. ಈಗ ನಾವು ಮೆಲ್ಲ-ಮೆಲ್ಲನೆ ನಮ್ಮ ಈಗಿನ ಕಾಲವನ್ನು ಹತ್ತಿರಿಸುತ್ತಿರುವೆವು. ಕಲ್ಲಿನ ಹೊಸ ಯುಗದ ಮನುಷ್ಯನಿಂದ ಈಗಿನ ಕಾಲದ ಮನುಷ್ಯನ ವರೆಗೆ ಒಮ್ಮಿಂದೊಮ್ಮೆ ಬದಲಾವಣೆಯಾಗಿಲ್ಲ, ಅಥವಾ ನಡುವೆ ಸಂದು ಬಿಟ್ಟಿಲ್ಲ. ಆದರೂ ನಾವು ಇವರಿಂದ ತೀರ ಬೇರೆಯಾಗಿರುವೆವು. ನಿಸರ್ಗದ ನೀತಿಗನುಸರಿಸಿ ಈ ಮಾರ್ಪಾಟುಗಳು ಸಾವಕಾಶವಾಗಿ ಆದುವು ವಿವಿಧ ಜನಾಂಗಗಳು ಬೆಳೆದು ಪ್ರತಿಯೊಂದು ವರ್ಗವೂ ತನ್ನ ತನ್ನ ಮಾರ್ಗವನ್ನು ರೂಪಿಸತೊಡಗಿತು. ಭೂಮಿಯ ವಾಯುಗುಣ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ತರಹದ್ದಿದ

ದರಿಂದ ಅದಕ್ಕೆ ಹೊಂದಿಕೆಯಾಗುವಂತೆ ಜನರು ತಮ್ಮನ್ನು ಸರಿಪಡಿಸಿಕೊಳ್ಳ ಬೇಕಾಯಿತು. ಆದರೆ ಇದನ್ನು ನಾವು ಮುಂದೆ ನೋಡಿಕೊಳ್ಳೋಣ.

ಇಂದು ನಾನು ನಿನಗೆ ಇನ್ನೊಂದು ಸಂಗತಿಯನ್ನು ಹೇಳಬೇಕೆಂದಿರುವೆನು. ಕಲ್ಲಿನ ಹೊಸ ಯುಗ ಮುಗಿಯುವ ಕಾಲದಲ್ಲಿ ಮನುಷ್ಯನಿಗೆ ದೊಡ್ಡ ಸಂಕಟವೊಂದು ಬಂದೊದಗಿತು. ಈಗಿನ ಭೂಮಧ್ಯ ಸಮುದ್ರ ಆಗ ಸಮುದ್ರವಾಗಿರಲಿಲ್ಲವೆಂದು ನಿನಗೆ ಮೊದಲೇ ಹೇಳಿರುವೆನು. ಅಲ್ಲಿ ಕೆಲವು ಕೊಳಗಳು ಮಾತ್ರ ಇದ್ದುವು. ಈ ಕೊಳಗಳಲ್ಲಿ ಅನೇಕ ಜನರು ನೆಲೆಗೊಂಡಿದ್ದರು. ಯುರೋಪು ಮತ್ತು ಆಫ್ರಿಕಾ ಖಂಡಗಳ ನಡುವೆ ಜಿಬ್ರಾಲ್ಟರಿನ ಹತ್ತಿರ ಇದ್ದ ಭೂಮಿ ಒಮ್ಮಿಂದೊಮ್ಮೆ ನೀರಿನಲ್ಲಿ ಕೊಚ್ಚಿಕೊಂಡು ಹೋಗಿ, ಅಟ್ಲಾಂಟಿಕ್ ಮಹಾಸಾಗರದ ನೀರು ಈಗ ಭೂಮಧ್ಯ ಸಮುದ್ರವಾಗಿರುವ ಕೊಳವನ್ನು ಹೊಕ್ಕಿತು. ನೀರು ಒಳಹೊಕ್ಕು ತುಂಬುತ್ತಿದ್ದಂತೆ ಅಲ್ಲಿಯ ಕೊಳಗಳ ಮೇಲೆ ಇಲ್ಲವೆ ಇವುಗಳ ಹತ್ತಿರ ಇರುತ್ತಿದ್ದ ಎಷ್ಟೋ ಜನರು ನೀರಿನಲ್ಲಿ ಮುಳುಗಿ ಹೋಗಿರಬಹುದು. ಬೇರೆ ಕಡೆಗೆ ಹೋಗಿ ತಮ್ಮನ್ನು ತಾವು ಉಳಿಸಿಕೊಳ್ಳಲು ಅವರಿಂದ ಸಾಧ್ಯವಾಗಲಿಲ್ಲ. ನೂರಾರು ಮೈಲುಗಳ ವರೆಗೆ ಎಲ್ಲೆಡೆಯಲ್ಲಿಯೂ ನೀರೇ ನೀರಾಯಿತು. ದಾರಿ ತುಂಬಿಹೋಗುವ ವರೆಗೂ ಅಟ್ಲಾಂಟಿಕ್ ಮಹಾಸಾಗರದ ನೀರು ಒಳನುಗ್ಗಿತು ಹೀಗೆ ಭೂಮಧ್ಯ ಸಮುದ್ರವಾಯಿತು.

ಜಲಪ್ರಳಯದ ವಿಷಯವನ್ನು ನೀನು ಬಹುಶಃ ಕೇಳಿರಬಹುದು, ಅಥವಾ ಓದಿರಬಹುದು. ಬೈಬಲಿ (Bible) ನಲ್ಲಿ ಈ ಸಂಗತಿಯನ್ನು ಹೇಳಲಾಗಿದೆ. ಇದಲ್ಲದೆ ನಮ್ಮ ಹಲಕೆಲವು ಸಂಸ್ಕೃತ ಗ್ರಂಥಗಳಲ್ಲಿಯೂ ಈ ಪ್ರಳಯದ ಉಲ್ಲೇಖವಿದೆ ಭೂಮಧ್ಯ ಸಮುದ್ರ ನೀರಿನಿಂದ ತುಂಬಿಕೊಳ್ಳುತ್ತಿದ್ದಾಗ ಆದ ಮಹಾ ಜಲಪ್ರಳಯವೇ ಇದಾಗಿರಬಹುದು. ಇಂತಹ ಭಯಂಕರ ಕುತ್ತಿನಿಂದ ತಪ್ಪಿಸಿಕೊಂಡು ಉಳಿದ ಹಲಕೆಲವು ಜನರು ಈ ಸಂಗತಿಯನ್ನೆಲ್ಲ ತಮ್ಮ ಮಕ್ಕಳು ಮೊಮ್ಮಕ್ಕಳಿಗೆ ಹೇಳಿರಬೇಕು. ಇವರು ಇದನ್ನು ನೆನಪಿನಲ್ಲಿಟ್ಟುಕೊಂಡು ಮುಂದಿನವರಿಗೆ ಹೇಳುತ್ತ ಬಂದರು. ಹೀಗೆ ಈ ಕತೆ ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಯ ವರೆಗೆ ಸಾಗುತ್ತ ಬಂದಿದೆ.

---

೮

# ಬೇರೆ ಬೇರೆ ಜನಾಂಗಗಳು ಹೇಗೆ ಆದುವು?

ವಿಶೇಷವಾಗಿ ಕೊಳಗಳಲ್ಲಿರುತ್ತಿದ್ದ ಕಲ್ಲಿನ ಹೊಸ ಯುಗದ ಮನುಷ್ಯರನ್ನು ಹಿಂದಿನ ಓಲೆಯಲ್ಲಿ ನಾವು ತಿಳಿದುಕೊಂಡೆವು. ಇವರು ಬಗೆ-ಬಗೆಯಿಂದ ಏಳಿಗೆ ಹೊಂದಿದುದನ್ನು ನಾವು ನೋಡಿಕೊಂಡೆವು. ಭೂಮಿಯನ್ನು ಸಾಗುವಳಿಮಾಡುವುದನ್ನು ಇವರು ಕಂಡುಹಿಡಿದರು. ಅಡಿಗೆ ಮಾಡುವುದನ್ನೂ ತಮ್ಮ ಉಪಯೋಗಕ್ಕಾಗಿ ಪ್ರಾಣಿಗಳನ್ನು ಪಳಗಿಸುವುದನ್ನೂ ಅರಿತುಕೊಂಡರು. ಇದೆಲ್ಲ ನಡೆದುದು ಹಲವು ಸಾವಿರ ವರುಷಗಳ ಹಿಂದೆ. ಇವರನ್ನು ಕುರಿತು ನಮಗೆ ಹೆಚ್ಚಿಗೆ ಗೊತ್ತಾಗುವುದಿಲ್ಲ. ಆದರೆ ಈಗ ಜಗತ್ತಿನಲ್ಲಿರುವ ಬಹುತರ ಎಲ್ಲ ಜನಾಂಗಗಳು ಕಲ್ಲಿನ ಹೊಸ ಯುಗದ ಈ ಜನರಿಂದಲೇ ಹುಟ್ಟಿ ಬಂದಿರಬಹುದು. ಬಿಳುಪು, ಹಳದಿ, ಕಂದು ಮತ್ತು ಕಪ್ಪು ಬಣ್ಣದ ಜನರು ನಮಗೆ ಕಾಣುವುದು ನಿನಗೆ ಗೊತ್ತಿದೆ. ಆದರೆ ನಿಜವಾದ ಸಂಗತಿಯೆಂದರೆ ಮನುಷ್ಯ ಸಂತತಿಗಳನ್ನು ಹೀಗೆ ನಾಲ್ಕು ಭಾಗ ಮಾಡುವುದು ಸುಲಭವಲ್ಲ. ಸಂತತಿಗಳು ಒಂದರಲ್ಲೊಂದು ಬೆರೆತುಹೋಗಿರುವುದರಿಂದ ಅವರೊಳಗಿನ ಅನೇಕ ಜನರು ಯಾವ ಭಾಗದವರೆಂದು ಹೇಳುವುದು ಕಷ್ಟವಾಗಿದೆ. ವೈಜ್ಞಾನಿಕರು ಜನರ ತಲೆಗಳ ಅಳತೆ ಮಾಡಿ ಮನುಷ್ಯರ ಸಂತತಿಯನ್ನು ಒಮ್ಮೊಮ್ಮೆ ಕಂಡುಹಿಡಿಯುತ್ತಾರೆ. ಇದನ್ನು ಕಂಡುಕೊಳ್ಳುವ ಬೇರೆ ಕೆಲವು ಬಗೆಗಳೂ ಇವೆ.

ಈ ತರದ ಬೇರೆ ಬೇರೆ ಜನಾಂಗಗಳು ಹೇಗೆ ಹುಟ್ಟಿದುವು? ಇವೆಲ್ಲ ಒಂದೇ ಜನಾಂಗದಿಂದ ಹುಟ್ಟಿದ್ದಾದರೆ ಇವುಗಳಲ್ಲಿ ಒಂದಕ್ಕೂ ಇನ್ನೊಂದಕ್ಕೂ ಇಷ್ಟೊಂದು ಭೇದವಿರಲು ಕಾರಣವೇನು? ನೀಗ್ರೋ ಮನುಷ್ಯನು ಜರ್ಮನಿಯ ಮನುಷ್ಯನಿಗಿಂತ ಬಹಳ ಭಿನ್ನನಾಗಿರುವನೆಂಬುದನ್ನು ನೀನು ಬಲ್ಲೆ. ಒಬ್ಬನು ಕಪ್ಪಾದರೆ ಇನ್ನೊಬ್ಬನು ಬೆಳ್ಳಗಿರುವನು. ಜರ್ಮನ್ ಮನುಷ್ಯನಿಗೆ ತಿಳಿಬಣ್ಣದ ಉದ್ದವಾದ ಕೂದಲು ಇರುವವು. ನಿಗ್ರೋನಿಗೆ ಕಪ್ಪಾದ, ಕಿರಿದಾದ, ಮುಡಿಗೂದಲಿರುವವು. ಚೀನಿ ಮನುಷ್ಯನು ಇವರಿಬ್ಬರಿಂದ ಬೇರೆ ಈ ಹೆಚ್ಚುಕಡಿಮೆಗಳು ಹೇಗೆ ಉಂಟಾದುವೆಂದು ಹೇಳುವುದು ಕಷ್ಟ. ಆದರೆ ಇದರ ಕೆಲವು ಕಾರಣಗಳು ನಮಗೆ ತಿಳಿದಿವೆ. ಪಶು

ಗಳು ಸುತ್ತುಮುತ್ತಲಿನ ಪರಿಸ್ಥಿತಿಯೊಂದಿಗೆ ತಮ್ಮನ್ನು ಹೊಂದಿಸಿಕೊಳ್ಳು ತ್ತಿದ್ದಂತೆಯೇ ಹೇಗೆ ಮಾರ್ಪಡುತ್ತ ನಡೆದವೆಂಬುದನ್ನು ನಾನು ನಿನಗೆ ಈ ಮೊದಲೇ ಹೇಳಿರುವೆನು. ನಿಗ್ರೊ ಮತ್ತು ಜರ್ಮನಿಯ ಮನುಷ್ಯರು ಬೇರೆ ಬೇರೆ ತರದ ಮನುಷ್ಯ ಜಾಯಿಂದ ಹುಟ್ಟಿ ಬೆಳೆದಿರಬಹುದು. ಆದರೆ ಒಂದಾನೊಂದು ಕಾಲದಲ್ಲಿ ಇವರಿಬ್ಬರ ಮೂಲಪುರುಷನೂ ಒಬ್ಬನೇ ಆಗಿರ ಬೇಕು. ಆದುದರಿಂದ ಸುತ್ತುಮುತ್ತಲಿನ ಪರಿಸ್ಥಿತಿಗಳೊಂದಿಗೆ ತಮ್ಮನ್ನು ಹೊಂದಿಸಿಕೊಳ್ಳುವಾಗ ಈ ಭೇದಗಳು ಉಂಟಾಗಿರಬಹುದು. ಅಥವಾ ಹಲವು ಪ್ರಾಣಿಗಳು ಪರಿಸ್ಥಿತಿಯೊಂದಿಗೆ ಬೇಗನೇ ತಮ್ಮನ್ನು ಸರಿಪಡಿಸಿ ಕೊಂಡಂತೆ ಕೆಲವು ಜನರೂ ಹೀಗೆ ಹೊಂದಿಕೊಳ್ಳಲು ಶಕ್ತರಾಗಿರಬಹುದು.

ಹೀಗೆ, ಉತ್ತರ ದಿಕ್ಕಿನ ಕಡೆಗೆ ಬಹುದೂರ, ಬಹಳ ಚಳಿ ಮತ್ತು ಹಿಮದಲ್ಲಿರುತ್ತಿರುವ ಜನರು ಚಳಿಯನ್ನು ತಡೆದುಕೊಳ್ಳುವ ಶಕ್ತಿಯನ್ನು ಬೆಳೆಯಿಸಿಕೊಂಡರು. ಎಸ್ಕಿಮೋ ಜನರು ಉತ್ತರ ದಿಕ್ಕಿನ ಹಿಮಪ್ರದೇಶ ದಲ್ಲಿ ಇಂದಿಗೂ ಇರುತ್ತಿರುವರು. ಅವರು ಹೆಚ್ಚಿನ ಚಳಿಯನ್ನು ತಡೆದು ಕೊಳ್ಳುವ ಶಕ್ತಿಯನ್ನು ಬೆಳೆಯಿಸಿಕೊಂಡರು. ಅವರನ್ನು ನಮ್ಮ ದೇಶದಂತಿ ರುವ ಉಷ್ಣಪ್ರದೇಶಗಳಿಗೆ ತಂದರೆ ಅವರು ಸತ್ತುಹೋಗಬಹುದು. ಜಗತ್ತಿನ ಉಳಿದ ಭಾಗಗಳಿಂದ ಇವರು ಬೇರ್ಪಟ್ಟಿರುವರು. ಇವರು ಬಹಳ ಕಷ್ಟದಿಂದ ಬಾಳುವೆಯನ್ನು ಸಾಗಿಸಬೇಕಾಗುವುದು. ಆದುದರಿಂದ ಜಗತ್ತಿನ ಉಳಿದ ಜನರು ಅನೇಕ ಸಂಗತಿಗಳನ್ನು ಕಲಿತುಕೊಂಡಿರುವಂತೆ ಇವರು ಕಲಿತಿಲ್ಲ. ಆಫ್ರಿಕೆಯಲ್ಲಿ ಇಲ್ಲವೆ ಭೂಮಧ್ಯ ರೇಖೆಯ ಹತ್ತಿರ ಉಷ್ಣದೇಶದಲ್ಲಿ ವಾಸಿ ಸುವ ಜನರಿಗೆ ಕಾವು ಒಗ್ಗಿಹೋಗಿದೆ. ಸೂರ್ಯನ ಬಿಸಿಲನ್ನು ತಿಂದು ತಿಂದು ಇವರ ಮೈಬಣ್ಣ ಕಪ್ಪಾಗಿದೆ ಕಡಲಿನ ದಂಡೆ ಅಥವಾ ಇನ್ನೆಲ್ಲಿಯಾದರೂ ನೀನು ಬಿಸಿಲಿನಲ್ಲಿ ಹೆಚ್ಚು ಕಾಲ ಕಳೆದರೆ ನಿನ್ನ ಮೈಬಣ್ಣ ಈಗಿದ್ದುದಕ್ಕಿಂತ ಕಂದು, ಮಾಸುಗೆಂಪು, ಇಲ್ಲವೇ ಕಪ್ಪಾಗುವುದು ನಿನಗೆ ಗೊತ್ತಿದೆ. ಬರಿಯ ಕೆಲವು ವಾರಗಳ ಬಿಸಿಲಿನಿಂದ ನಿನ್ನ ಮೈಬಣ್ಣ ಹೆಚ್ಚು ಕಪ್ಪಾಗುವುದಾದರೆ ಯಾವಾಗಲೂ ಬಿಸಿಲಿನೊಳಗೆ ಬಾಳುವೆ ಮಾಡುವ ಮನುಷ್ಯನ ಮೈಯು ಎಷ್ಟು ಕಪ್ಪಾಗಿರಬಹುದು! ಮಕ್ಕಳು, ಮೊಮ್ಮಕ್ಕಳು, ಮತ್ತು ಮರಿಮಕ್ಕಳು ನೂರಾರು ವರುಷಗಳ ವರೆಗೆ ಉಷ್ಣ ಪ್ರದೇಶಗಳಲ್ಲಿ ಬಾಳುವುದರಿಂದ ಇವರು ಕಂದಿ ಕಂದಿ ಕೊನೆಗೆ ತೀರ ಕಪ್ಪಾಗುವರು. ಹಿಂದುಸ್ತಾನದ ಒಕ್ಕಲಿಗನು

ಮಧ್ಯಾಹ್ನದ ಉರಿಬಿಸಿಲಿನಲ್ಲಿ ದುಡಿಯುತ್ತಿರುವುದನ್ನು ನೀನು ನೋಡಿರುವೆ. ಹೊದ್ದುಕೊಳ್ಳಲು ಬಟ್ಟೆಬರೆಗಳಿಲ್ಲದಷ್ಟು ಇವನು ಬಡವನಾಗಿರುವನು. ಬಿಸಿಲಿನಲ್ಲಿ ಇವನ ಮೈಯೆಲ್ಲ ತೆರೆದಿರುತ್ತದೆ. ಇವನ ಆಯುಷ್ಯವೆಲ್ಲವೂ ಹೀಗೆಯೇ ಕಳೆದುಹೋದ ಮೇಲೆ ಇವನು ಕಪ್ಪುಗಟ್ಟಲೇ ಬೇಕಲ್ಲವೆ?

ಹೀಗೆ, ಜನರ ಮೈಬಣ್ಣ ಅಲ್ಲಿಯ ವಾತಾವರಣದಿಂದ ಬಂದುದೆಂಬುದನ್ನು ನಾವು ಕಂಡುಹಿಡಿದೆವು. ಮನುಷ್ಯನ ಯೋಗ್ಯತೆ, ಒಳ್ಳೆಯತನ ಮತ್ತು ಚೆಲುವಿಕೆಗೂ ಅದಕ್ಕೂ ಏನೂ ಸಂಬಂಧವಿಲ್ಲ. ಬಹಳ ಕಾಲದ ವರೆಗೆ ಉಷ್ಣದೇಶದಲ್ಲಿರುವ ಬಿಳಿ ಮನುಷ್ಯನೂ ಕಪ್ಪಾಗುವನು. ಆದರೆ ಸೂರ್ಯನ ಬಿಸಿಲು ಬಡೆಯದಂತೆ ನೆಳಲೊಳಗೆ ಬೀಸಣಿಕೆಯಿಂದ ಬೀಸಿಕೊಳ್ಳುತ್ತ, ಮನೆಯಲ್ಲಿದ್ದರೆ ಮಾತ್ರ ಕಪ್ಪಾಗುವುದಿಲ್ಲ. ನಾವು ಕಾಶ್ಮೀರದವರೆಂಬುದನ್ನು ನೀನು ಬಲ್ಲೆ. ಇನ್ನೂರು ವರುಷಗಳಿಗೂ ಹಿಂದೆ ನಮ್ಮ ಪೂರ್ವಜರು ಕಾಶ್ಮೀರದಲ್ಲಿರುತ್ತಿದ್ದರು. ಅಲ್ಲಿಯ ಒಕ್ಕಲಿಗರಿಂದ ಕೂಲಿಕಾರರ ವರೆಗೆ ಎಲ್ಲರೂ ಚೆಲುವರು, ತಿಳಿಬಣ್ಣದವರು. ಕಾಶ್ಮೀರದ ಹವಾಮಾನ ಶೀತವಾಗಿರುವುದೇ ಇದಕ್ಕೆ ಕಾರಣ. ಕಾಶ್ಮೀರದ ಅದೇ ಜನರು ಹಿಂದುಸ್ತಾನದ ಹೆಚ್ಚು ಉಷ್ಣವಾಗಿರುವ ಇತರ ಭಾಗಗಳಲ್ಲಿ ನೆಲಸಿದರೆ ಕೆಲವು ತಲೆಗಳಲ್ಲಿಯೇ ಅವರು ಕಪ್ಪಾಗಿಹೋಗುವರು. ನಮ್ಮ ಎಷ್ಟೋ ಕಾಶ್ಮೀರೀ ಗೆಳೆಯರಲ್ಲಿ ಕೆಲವರು ತಿಳಿಬಣ್ಣದವರಾಗಿಯೂ ಕೆಲವರು ಕಪ್ಪಾಗಿಯೂ ಇರುವರು. ಅಲ್ಲಿಯ ಕುಟುಂಬಗಳು ಹಿಂದುಸ್ತಾನದ ಉಳಿದ ಭಾಗಗಳಲ್ಲಿ ಹೆಚ್ಚುಹೆಚ್ಚಾಗಿ ಕಾಲ ಕಳೆದಂತೆ ಕಪ್ಪಾಗುತ್ತ ಹೋಗುವ ಸಂಭವವಿದೆ. ಹೀಗೆ ವಾಯುಗುಣವೇ ಮೈಬಣ್ಣ ಮತ್ತು ರೂಪದ ಕಾರಣ. ಆದರೆ ಹಲವು ಜನರು ಉಷ್ಣ ಪ್ರದೇಶದಲ್ಲಿರುತ್ತಿದ್ದರೂ ಬೈಲಿನಲ್ಲಿ ದುಡಿಯುತ್ತಿರಲಿಕ್ಕಿಲ್ಲ. ದೊಡ್ಡ ದೊಡ್ಡ ಮನೆಗಳಲ್ಲಿರುವಷ್ಟು ಶ್ರೀಮಂತರಾಗಿ ತಮ್ಮನ್ನೂ ರೂಪವನ್ನೂ ಕಾಪಾಡಿಕೊಳ್ಳುತ್ತಿರಬಹುದು. ಸಂಪತ್ತುಳ್ಳ ಮನೆತನ ಎಷ್ಟೋ ತಲೆಗಳ ವರೆಗೆ ಇದರಂತೆ ಇದ್ದು ಗಾಳಿ ಬಿಸಿಲಿಗೆ ಹೊರತಾಗಿರಬಹುದು. ಆದರೆ ತಾವು ಸ್ವತಃ ದುಡಿಯದೆ ಇತರರ ದುಡಿತದ ಮೇಲೆ ಬಾಳುವೆ ಮಾಡುವುದೇನೂ ದೊಡ್ಡತನದ ಲಕ್ಷಣವಲ್ಲ.

ಸಾಮಾನ್ಯವಾಗಿ ಹಿಂದುಸ್ತಾನದ ಉತ್ತರ ದಿಕ್ಕಿನಲ್ಲಿರುವ ಕಾಶ್ಮೀರ ಮತ್ತು ಪಂಜಾಬಿನ ಜನರು ಚೆಲುವರು ಆದರೆ ದಕ್ಷಿಣಕ್ಕೆ ಹೋದಂತೆ

ಕಪ್ಪಾಗುತ್ತಾರೆ. ಮದ್ರಾಸು ಮತ್ತು ಲಂಕೆಯ ಜನರು ತೀರ ಕಪ್ಪಾಗಿರುವುದನ್ನು ನೀನು ನೋಡಿರುವೆ. ಇದೆಲ್ಲ ಗಾಳಿ ಬಿಸಿಲುಗಳ ಪರಿಣಾಮವೆಂದು ನಿನಗೆ ತಾನಾಗಿಯೇ ಗೊತ್ತಾಗಿರಬಹುದು. ಯಾಕೆಂದರೆ ನೀನು ದಕ್ಷಿಣಕ್ಕೆ ಹೋದಂತೆ ಭೂಮಧ್ಯ ರೇಖೆಯನ್ನು ಸಮೀಪಿಸುತ್ತಿರುವೆ ಬಿಸಿಲು ಹೆಚ್ಚಾಗ ತೊಡಗುವುದು. ಹಿಂದುಸ್ತಾನದ ಬೇರೆ ಬೇರೆ ಭಾಗಗಳಲ್ಲಿಯ ಜನರ ಮೈಬಣ್ಣ ಹೆಚ್ಚು ಕಡಿಮೆಯಾಗಿರಲು ಇದೇ ಮುಖ್ಯ ಕಾರಣವೆಂಬುದು ಯಥಾರ್ಥವಾದ ಮಾತು. ಹಿಂದುಸ್ತಾನಕ್ಕೆ ಬಂದಿರುವ ಮೂಲ ಜನಾಂಗಗಳೊಳಗಿನ ಭೇದದಿಂದ ಈ ತರದ ಹೆಚ್ಚು ಕಡಿಮೆ ಕೆಲಮಟ್ಟಿಗಾದರೂ ಆಗಿರುವುದೆಂದು ನಮಗೆ ಮುಂದೆ ಗೊತ್ತಾಗುವುದು. ಹಿಂದಿನ ಕಾಲದಲ್ಲಿ ಎಷ್ಟೋ ಜನಾಂಗಗಳು ಬಂದು ಹಿಂದುಸ್ತಾನದಲ್ಲಿ ನೆಲಸಿರುವವು. ಆಯಾ ಜನಾಂಗಗಳು ಉಳಿದವರೊಂದಿಗೆ ಬೆರಿಕೆಯಾಗದೆ ಬೇರೆಯಾಗಿ ಉಳಿಯಬೇಕೆಂದು ಬಹಳ ಕಾಲದ ವರೆಗೆ ಯತ್ನಿಸಿದವು. ಆದರೂ ಪರಸ್ಪರರು ಬೆರೆತುಕೊಳ್ಳದೆ ಬೇರೆಯಾಗಿ ಉಳಿಯುವುದು ಸಾಧ್ಯವಾಗಲಿಲ್ಲ. ಯಾವನಾದರೊಬ್ಬ ಹಿಂದೀ ಮನುಷ್ಯನು ಇಂತಹ ಮೂಲಜನಾಂಗಕ್ಕೇ ಸೇರಿದವನೆಂದು ಈಗ ಹೇಳುವುದು ಕಷ್ಟವಾಗಿದೆ.

---

## ೯

# ಜನಾಂಗಗಳು ಮತ್ತು ಭಾಷೆಗಳು

ಮನುಷ್ಯನು ಜಗತ್ತಿನ ಯಾವ ಭಾಗದಲ್ಲಿ ಮೊದಲು ಹುಟ್ಟಿದನೆಂದು ನಾವು ಹೇಳಲಾರೆವು. ಜನವಸತಿಯಾದರೂ ಮೊದಲು ಎಲ್ಲಿತ್ತೆಂದು ನಮಗೆ ಗೊತ್ತಿಲ್ಲ. ಮನುಷ್ಯನು ಹಲವು ಕಡೆಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾಗಿ ಒಂದೇ ವೇಳೆಯಲ್ಲಿ ಹುಟ್ಟಿರಬಹುದು. ಹಿಮಯುಗದ ದೊಡ್ಡ ದೊಡ್ಡ ಮಂಜುಗುಡ್ಡಗಳು ಕರಗುತ್ತ ಉತ್ತರದ ಕಡೆಗೆ ಹಿಂದಕ್ಕೆ ಜರಿಯುತ್ತಿದ್ದಾಗ ಈ ಮನುಷ್ಯರು ಹೆಚ್ಚು ಉಷ್ಣ ಪ್ರದೇಶಗಳಲ್ಲಿ ಇರುತ್ತಿದ್ದಿರಬಹುದು. ಮಂಜು ಹೋದ ಕೂಡಲೆ, ಈಗ ಸೈಬೇರಿಯದಲ್ಲಿರುವ ಬೈಲುಗಳಂತೆ ಅಲ್ಲಿ ವಿಸ್ತಾರವಾದ ಹುಲ್ಲುಗಾಡುಗಳಾಗಿದ್ದಿರಬೇಕು. ತಮ್ಮ ದನಕರುಗಳನ್ನು ಮೇಯಿಸಲು ಮನುಷ್ಯರಿಗೆ ಹುಲ್ಲು ಬೇಕಾಗುತ್ತಿದ್ದುದರಿಂದ

ಅವರು ಅವುಗಳ ಸುತ್ತುಮುತ್ತು ತಿರುಗಾಡುತ್ತ ಬಾಳುವೆ ಮಾಡಿರಬಹುದು. ಕಂಡ ಕಂಡ ಹಾಗೆ ಅಲೆದಾಡುತ್ತ ನೆಲೆನಿಂತು ಬಾಳುವೆ ಮಾಡಿಕೊಂಡಿರದ ಈ ಜನರಿಗೆ ಗೂಳಿಕಾರ (Nomads)ರೆಂದು ಹೆಸರು. ಈ ಗೂಳಿಕಾರರು ಅನೇಕ ದೇಶಗಳಲ್ಲಿ ಈಗಲೂ ಇದ್ದಾರೆ. ಹಿಂದುಸ್ತಾನದಲ್ಲಿಯೂ ಜಿಪ್ಸಿ (Gypsy) ಗಳಂತಹ ಗೂಳಿಕಾರರಿದ್ದಾರೆ

ಜನರು ದೊಡ್ಡ ದೊಡ್ಡ ಹೊಳೆಗಳ ದಂಡೆಯ ಹತ್ತಿರ ನೆಲೆಗೊಂಡಿದ್ದಿರಬೇಕು ಯಾಕೆಂದರೆ ಅಲ್ಲಿ ಭೂಮಿ ಕಸುವುಳ್ಳದ್ದಾಗಿಯೂ ಒಕ್ಕಲುತನಕ್ಕೆ ಯೋಗ್ಯವಾಗಿಯೂ ಇರುತ್ತದೆ. ನೀರು ಬಹಳವಿದ್ದುದರಿಂದ ಭೂಮಿಯಲ್ಲಿ ಬೆಳೆಯನ್ನು ಬೆಳೆದುಕೊಳ್ಳುವುದು ಹಗುರಾಗಿತ್ತು. ಹಿಂದುಸ್ತಾನದಲ್ಲಿಯ ಸಿಂಧು ಮತ್ತು ಗಂಗಾ ನದಿಗಳಂತಹ ಹಿರಿಹೊಳೆಗಳ ಹತ್ತಿರ ಜನರು ವಸತಿ ಮಾಡಿಕೊಂಡಿದ್ದರೆಂದು ನಾವು ಊಹಿಸುತ್ತೇವೆ. ಅದರಂತೆಯೆ ಮೆಸಪೊಟೆಮಿಯದಲ್ಲಿ ಯುಫ್ರಟಿಸ್ ಮತ್ತು ಟೈಗ್ರಿಸ್ ನದಿಗಳ ಹತ್ತಿರ, ಇಜಿಪ್ತು ದೇಶದಲ್ಲಿ ನೈಲ್ ನದಿಯ ಹತ್ತಿರ, ಈ ಜನರು ಇದ್ದಿರಬೇಕು ಚೀನದಲ್ಲಿಯೂ ಹಾಗೆಯೆ.

ನಮಗೆ ಅಲ್ಪಸ್ವಲ್ಪ ಗೊತ್ತಾಗುವ ಹಿಂದುಸ್ತಾನದ ಹಳೆಯ ಜನಾಂಗವೆಂದರೆ ದ್ರಾವಿಡರು. ಆಮೇಲೆ ಆರ್ಯರು ಬಂದರು. ನಂತರ ಬಂದವರು ಮೂಡಲಿನ ಮೊಗಲರು. ದಕ್ಷಿಣದಲ್ಲಿರುತ್ತಿರುವ ಎಷ್ಟೋ ಜನರು ಇಂದಿಗೂ ದ್ರಾವಿಡ ವಂಶದವರು. ಬಡಗಣವರಿಗಿಂತ ದ್ರಾವಿಡರು ಹೆಚ್ಚು ಕಪ್ಪು. ಏಕೆಂದರೆ ಇವರು ಹಿಂದುಸ್ತಾನಕ್ಕೆ ಈರ ಮೊದಲು ಬಂದವರು. ದ್ರಾವಿಡರು ನಾಗರಿಕತೆಯಲ್ಲಿ ಹೆಚ್ಚು ಮುಂದುವರಿದವರಾಗಿದ್ದರು. ಇವರು ಸ್ವಂತ ಭಾಷೆಯುಳ್ಳವರಾಗಿದ್ದು ಉಳಿದ ಜನರೊಡನೆ ಬಹಳವಾದ ವ್ಯವಹಾರ ಉದ್ಯಮಗಳನ್ನು ಮಾಡುತ್ತಿದ್ದರು. ಆದರೆ ನಾನು ಈಗ ಹೇಳುತ್ತಿರುವ ವಿಷಯ ಈ ಕಾಲಕ್ಕೆ ಸಂಬಂಧಪಟ್ಟದ್ದಲ್ಲ. ಇನ್ನೂ ಮುಂದಿನದು.

ಆ ಪ್ರಾಚೀನ ಕಾಲದಲ್ಲಿ ಪಶ್ಚಿಮ ಮತ್ತು ಮಧ್ಯ ಏಷಿಯದಲ್ಲಿ, ಮತ್ತು ಪೂರ್ವ ಯುರೋಪಿನಲ್ಲಿ ಹೊಸ ಜನಾಂಗವೊಂದು ಬೆಳೆಯುತ್ತಿದ್ದಿತು ಈ ಜನಾಂಗಕ್ಕೆ ಆರ್ಯರೆಂದು ಹೆಸರು. ಸಂಸ್ಕೃತ ಭಾಷೆಯಲ್ಲಿ ಆರ್ಯನೆಂದರೆ ಸಂಭಾವಿತ ಅಥವಾ ದೊಡ್ಡ ಮನುಷ್ಯನೆಂದು ಅರ್ಥ. ಆರ್ಯ ಜನಾಂಗವು ಮಾತನಾಡುವ ಹಲವು ಭಾಷೆಗಳಲ್ಲಿ ಸಂಸ್ಕೃತ ಒಂದು. ಈ ಭಾಷೆಯ

ಜನಾಂಗದವರು ತಾವು ದೊಡ್ಡ ಮನುಷ್ಯರೆಂದೂ, ಸಂಭಾವಿತರೆಂದೂ ತಿಳಿದುಕೊಳ್ಳುತಿದ್ದರು! ಈಗಿನವರಂತೆ ಇವರು ತಮಗೆ ತಾವೇ ದೊಡ್ಡವರೆಂದು ಹೆಮ್ಮೆಯಿಂದ ಹೊಗಳಿಕೊಳ್ಳುತಿದ್ದರು. ಆಂಗ್ಲ ಮನುಷ್ಯನು ಭೂಮಿಯ ಮೇಲೆ ತಾನೇ ಮೊಟ್ಟಮೊದಲಿನವನೆಂದು ತಿಳಿದುಕೊಳ್ಳುವುದು ನಿನಗೆ ಗೊತ್ತಿದೆ. ಫ್ರಾನ್ಸ್ ದೇಶದ ಫ್ರೆಂಚರು ತಾವೇ ಎಲ್ಲರಿಗಿಂತ ಶ್ರೇಷ್ಠರೆಂದು ತಿಳಿದುಕೊಂಡಿರುವರು. ಜರ್ಮನಿ ಮತ್ತು ಅಮೇರಿಕೆಯ ಜನರೂ ಇನ್ನುಳಿದವರೂ ಹಾಗೆಯೇ ತಿಳಿದುಕೊಳ್ಳುತ್ತಿರುವರು.

ಈ ಆರ್ಯರು ಉತ್ತರ ಏಷಿಯ ಮತ್ತು ಯುರೋಪಿನಲ್ಲಿಯ ವಿಶಾಲವಾದ ಹುಲ್ಲುಗಾವಲುಗಳಲ್ಲಿ ಗುಳಿಕಟ್ಟಿಕೊಂಡು ತಿರುಗಾಡುತ್ತಿದ್ದರು. ಆದರೆ ತಮ್ಮ ಜನಸಂಖ್ಯೆ ಹೆಚ್ಚಾಗಿ ವಾಯುಗುಣ ಉಷ್ಣವಾಗುತ್ತ ಹುಲ್ಲು ಕಡಿಮೆಯಾದಂತೆ, ಅವರೆಲ್ಲರಿಗೂ ಸಾಕಾಗುವಷ್ಟು ಅನ್ನ ದೊರೆಯದಂತಾಯಿತು. ಆದುದರಿಂದ ಆಹಾರಕ್ಕಾಗಿ ಅವರು ಭೂಮಿಯ ಬೇರೆಡೆಗಳಿಗೆ ನಿರ್ವಾಹವಿಲ್ಲದೆ ಹೋಗಬೇಕಾಯಿತು. ಅವರು ಯುರೋಪಿನಲ್ಲೆಲ್ಲ ಹರಡಿದರು. ಹಾಗೂ ಹಿಂದುಸ್ಥಾನ, ಪರ್ಷಿಯ ಮತ್ತು ಮೆಸಪೊಟೆಮಿಯ ದೇಶಗಳಿಗೆ ಬಂದರು. ಹೀಗೆ ಯುರೋಪು, ಉತ್ತರ ಹಿಂದುಸ್ಥಾನ, ಪರ್ಷಿಯ ಮತ್ತು ಮೆಸಪೊಟೆಮಿಯದ ಬಹುತರ ಎಲ್ಲ ಜನರಲ್ಲಿ ಪರಸ್ಪರರಲ್ಲಿ ಎಷ್ಟೋ ಭೇದಗಳು ಕಂಡುಬಂದರೂ ಇವರೆಲ್ಲ ನಿಜವಾಗಿ ಮೂಲಪುರುಷರಾದ ಆರ್ಯರ ಬಳ್ಳಿಯವರೇ. ಆದರೇನು? ಇದು ಬಹಳ ಹಿಂದಿನ ಮಾತು. ಅಂದಿನಿಂದ ಇಂದಿನ ವರೆಗೆ ಎಷ್ಟೋ ಸಂಗತಿಗಳು ನಡೆದು ಜನಾಂಗಗಳು ಒಂದರೊಳಗೊಂದು ಬೆರೆತುಕೊಂಡಿರುವವು. ಆದುದರಿಂದ ಪ್ರಾಚೀನ ಆರ್ಯರು ಜಗತ್ತಿನೊಳಗಿನ ಈಗಿನ ಜನರ ಮೂಲ ಜನಾಂಗವೊಂದಾಗಿದ್ದರು.

ಇನ್ನೊಂದು ದೊಡ್ಡ ಜನಾಂಗವೆಂದರೆ ಮಂಗೋಲರದು. ಈ ಜನಾಂಗ ಏಷಿಯ ಖಂಡದ ಪೂರ್ವ ಭಾಗದಲ್ಲಿ, ಎಂದರೆ ಚೀನ, ಜಪಾನು, ತಿಬೇಟು, ಸಯಾಮ್ ಮತ್ತು ಬ್ರಹ್ಮದೇಶದಲ್ಲಿ ಹಬ್ಬಿಕೊಂಡಿತು. ಕೆಲವೊಮ್ಮೆ ಇವರಿಗೆ ಹಳದಿ ಬಣ್ಣದ ಜನಾಂಗದವರೆಂದು ಕರೆಯುತ್ತಾರೆ. ಇವರ ಗಲ್ಲದೆಲುಬು ಎತ್ತರ; ಕಣ್ಣು ಚಿಕ್ಕವು.

ಆಫ್ರಿಕೆಯ ಮತ್ತು ಇನ್ನೂ ಕೆಲವು ದೇಶದ ಜನರು ನಿಗ್ರೋ ಜನರು. ಇವರು ಆರ್ಯರೂ ಅಲ್ಲ, ಮಂಗೋಲರೂ ಅಲ್ಲ. ಬಹು ಕಪ್ಪು ಬಣ್ಣದವರು.

ಅರಬಸ್ತಾನ ಪಾಲಿಸ್ತಾನದ ಜನರು—ಅರಬರು ಮತ್ತು ಹಿಬ್ರೂ ಜನರು—ಬೇರೆಯಾದ ಇನ್ನೊಂದು ವಂಶದವರು.

ಸಾವಿರಾರು ವರುಷಗಳ ಅವಧಿಯಲ್ಲಿ ಮಾನವ ವಂಶದ ಈ ಮೂಲ ಜನಾಂಗಗಳು ಒಡೆದು ಸಣ್ಣ ಪುಟ್ಟ ಜನಾಂಗಗಳಾಗಿ ಒಂದರಲ್ಲೊಂದು ಬೆರೆತುಕೊಂಡಿರುವವು. ಆದರೆ ಈ ಸಂಗತಿ ನಮಗೆ ಬೇಕಾಗಿಲ್ಲ. ಮಾನವ ವಂಶದ ಬೇರೆ ಬೇರೆ ಜನಾಂಗಗಳನ್ನು ಗುರುತಿಸುವ ಮಹತ್ತರವಾದ ಮನೋರಂಜಕವಾದ ಮಾರ್ಗವೆಂದರೆ ಅವರವರ ಭಾಷೆಗಳನ್ನು ಅಭ್ಯಾಸಿಸುವುದು. ಪ್ರತಿಯೊಂದು ಜನಾಂಗಕ್ಕೆ ಮೂಲದಲ್ಲಿ ಸ್ವತಂತ್ರವಾದ ಭಾಷೆಯೊಂದಿತ್ತು. ಕಾಲ ಕಳೆದಂತೆ ಈ ಭಾಷೆಯಿಂದ ಹಲವಾರು ಭಾಷೆ ಹುಟ್ಟಿದುವು. ಆದರೆ ಈ ಎಲ್ಲ ಭಾಷೆಗಳು ಒಂದೇ ಮೂಲಭಾಷೆಯ ಮಕ್ಕಳು ಮೊಮ್ಮಕ್ಕಳಂತಿರುವವು. ಇವುಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಒಂದೇ ತರದ ಶಬ್ದಗಳನ್ನು ನಾವು ಸುಲಭವಾಗಿ ಕಂಡುಕೊಳ್ಳಬಲ್ಲೆವು. ಪರಸ್ಪರರ ಸಂಬಂಧವನ್ನು ಗೊತ್ತುಹಚ್ಚಬಲ್ಲೆವು.

ಆರ್ಯರು ಏಷಿಯ ಮತ್ತು ಯುರೋಪು ದೇಶಗಳಲ್ಲಿ ಹರಡಿಕೊಂಡ ಮೇಲೆ ಅವರಲ್ಲಿ ಪರಸ್ಪರರಲ್ಲಿ ಬಳಕೆ ತಪ್ಪಿಹೋಯಿತು. ಆ ಕಾಲದಲ್ಲಿ ಉಗಿಬಂಡಿ, ತಂತಿ, ಅಂಚೆ, ಬರೆದ ಪುಸ್ತಕಗಳು ಮೊದಲಾದ ಯಾವುದೂ ಇರಲಿಲ್ಲ. ಹೀಗೆ ಆರ್ಯರ ಪ್ರತಿಯೊಂದು ಗುಂಪಿನವರು ಒಂದೇ ಭಾಷೆಯನ್ನು ತಮ್ಮ ತಮ್ಮ ರೀತಿಗನುಸರಿಸಿ ನುಡಿಯತೊಡಗಿದರು. ಕೆಲವು ಕಾಲದ ನಂತರ ಈ ನುಡಿ ಮೂಲ ಭಾಷೆಯಿಂದ, ಅಥವಾ ಬೇರೆ ದೇಶಗಳ ಅಕ್ಕತಂಗಿಯರಂತಿದ್ದ ಉಳಿದ ಆರ್ಯ ಭಾಷೆಗಳಿಂದ ಅಗಲಿ ಬೇರೆಯಾಯಿತು. ಆದುದರಿಂದ ಈಗ ಜಗತ್ತಿನಲ್ಲಿ ನಮಗೆ ಅನೇಕ ಭಾಷೆಗಳು ಕಂಡುಬರುತ್ತವೆ.

ಈ ಭಾಷೆಗಳನ್ನು ಅಭ್ಯಾಸ ಮಾಡಿದರೆ, ಭಾಷೆಗಳು ಅನೇಕವಾಗಿದ್ದರೂ ಮೂಲಭಾಷೆಗಳು ಕೆಲವೇ ಎಂದು ನಮಗೆ ತೋರುವುದು. ಉದಾಹರಣೆಗಾಗಿ, ಆರ್ಯರು ಹೋದಲ್ಲೆಲ್ಲ ಅಲ್ಲಿಯ ಭಾಷೆ ಆರ್ಯ ಕುಟುಂಬಕ್ಕೇ ಸೇರಿತು. ಸಂಸ್ಕೃತ, ಲ್ಯಾಟಿನ್, ಗ್ರೀಕ್, ಇಂಗ್ಲಿಷು, ಫ್ರೆಂಚ್, ಜರ್ಮನ್, ಇಟಾಲಿಯನ್ ಮತ್ತು ಇನ್ನುಳಿದ ಭಾಷೆಗಳು ಆರ್ಯ ಭಾಷೆಯೆಂಬ ಒಂದೇ ಮನೆತನದ ಅಕ್ಕತಂಗಿಯರಂತಿರುವವು. ಹಿಂದೀ, ಉರ್ದು, ಬಂಗಾಲಿ, ಮರಾಠಿ, ಗುಜರಾತಿ ಮುಂತಾದ ಹಿಂದು

ಸ್ಥಾನದ ನಮ್ಮ ಎಷ್ಟೋ ಭಾಷೆಗಳು ಸಂಸ್ಕೃತ ಭಾಷೆಯ ಮಕ್ಕಳಂತಿದ್ದು, ಆರ್ಯ ಕುಟುಂಬಕ್ಕೆ ಸೇರಿದವುಗಳು.

ದೊಡ್ಡ ಭಾಷೆಯ ಇನ್ನೊಂದು ಕುಟುಂಬ ಚೀನಿಯದು. ಇದರೊಳಗೆ ಚೀನ, ಬ್ರಹ್ಮ, ಟಿಬೇಟು ಮತ್ತು ಸಿಯಾಮಿನ ಭಾಷೆಗಳು ಸೇರುವವು.

ಅರಬಿ ಮತ್ತು ಹಿಬ್ರುವನ್ನೊಳಗೊಂಡ ಸೆಮೆಟಿಕ್ ಭಾಷೆಯ ಗುಂಪು ಮೂರನೆಯದು.

ತುರ್ಕಿ ಮತ್ತು ಜಪಾನಿನಂತಹ ಕೆಲವು ಭಾಷೆಗಳು ಮೇಲೆ ಹೇಳಿದ ಯಾವ ಗುಂಪಿಗೂ ಸೇರುವದಿಲ್ಲ. ತಮಿಳು, ಕನ್ನಡ, ತೆಲುಗು, ಮಾಲೆಯಾಳು ಮುಂತಾದ ದಕ್ಷಿಣ ದೇಶದ ಕೆಲವು ಭಾಷೆಗಳು ಸಹ ಈ ಗುಂಪುಗಳಿಗೆ ಸಂಬಂಧಪಟ್ಟವುಗಳಲ್ಲ. ಇವು ದ್ರಾವಿಡ ಕುಟುಂಬಕ್ಕೆ ಸೇರಿದ ಬಹಳ ಪುರಾತನ ಭಾಷೆಗಳು.

---

## ೧೦

## ಭಾಷೆಗಳ ಬಳಗಗಳು

ಆರ್ಯರು ಅನೇಕ ದೇಶಗಳಲ್ಲಿ ಹೇಗೆ ಹರಡಿದರು ಮತ್ತು ಹೋದ ಹೋದಲ್ಲೆಲ್ಲ ತಮ್ಮ ಭಾಷೆಯನ್ನು—ಅದು ಯಾವುದೇ ಇರಲಿ—ಹೇಗೆ ಒಯ್ದರೆಂಬುದನ್ನು ನಾವು ತಿಳಿದುಕೊಂಡೆವು. ಆದರೆ ಬೇರೆ ಬೇರೆ ವಾತಾವರಣ, ಪರಿಸ್ಥಿತಿಗಳಿಗನುಸರಿಸಿ ಆರ್ಯರ ತಂಡಗಳಲ್ಲಿ ಅನೇಕ ಭೇದಗಳಾದುವು. ಪ್ರತಿಯೊಂದು ತಂಡ ತನಗೆ ತೋರಿದ ಹೊಸ ನಡತೆ, ಹೊಸ ರೂಢಿಗಳೊಂದಿಗೆ ಮಾರ್ಪಡುತ್ತ ನಡೆಯಿತು. ಒಂದು ತಂಡದವರು ಬೇರೆ ಸ್ಥಳಗಳಲ್ಲಿರುವ ಇತರ ತಂಡದವರನ್ನು ಕಾಣುವಂತಿರಲಿಲ್ಲ. ಯಾಕೆಂದರೆ ಆಗಿನ ಕಾಲದಲ್ಲಿ ದಾರಿ ನಡೆಯುವುದು ಬಹಳ ಬಿಗಿಯಾದ ಕೆಲಸವಾಗಿತ್ತು. ಆದುದರಿಂದ ಒಂದು ಗುಂಪು ಇನ್ನೊಂದು ಗುಂಪಿನಿಂದ ಬೇರೆಯಾದಂತಾಯಿತು. ಒಂದು ದೇಶದ ಜನರು ಹೊಸ ಸಂಗತಿಯೊಂದನ್ನು ಕಲಿತರೆ ಅದನ್ನು ಎರಡನೇ ದೇಶದ ಜನರಿಗೆ ತಿಳಿಸಲಾಗುತ್ತಿರಲಿಲ್ಲ. ಇದರಂತೆಯೆ ಮಾರ್ಪಾಡಾಗುತ್ತ ನಡೆಯಿತು. ಆರ್ಯರ ಒಂದೇ ಆಗಿದ್ದ ಕುಟುಂಬ ಕೆಲವು ತಲೆಗಳ ನಂತರ ಒಡೆದು ಬೇರೆ'ಬೇರೆ ತಂಡಗಳಾದುವು. ತಾವೆಲ್ಲರೂ

ಒಂದೇ ಕುಟುಂಬದವರೆಂಬುದನ್ನು ಕೂಡ ಅವರು ಮರೆತರು. ಒಂದೇ ಭಾಷೆಯಿಂದ ಅನೇಕ ಭಾಷೆಗಳಾದುವು. ಅವು ಒಂದರಿಂದೊಂದು ಬೇರೆ ಯಾಗಿದ್ದಂತೆ ತೋರಿತು.

ಈ ಭಾಷೆಗಳು ಬೇರೆ ಬೇರೆಯೆಂದು ಕಂಡುಬಂದರೂ ಒಂದೇ ತೆರ ನಾವ ಎಷ್ಟೋ ಸಾಮಾನ್ಯ ಶಬ್ದಗಳು ಮತ್ತು ಹೋಲಿಕೆಗಳು ಇವುಗಳಲ್ಲಿವೆ. ಸಾವಿರಾರು ವರ್ಷಗಳು ಸಂದನಂತರ, ಇಂದಿಗೂ ಬೇರೆ ಬೇರೆ ಭಾಷೆಗಳಲ್ಲಿ ಈ ತರದ ಸಾಮಾನ್ಯ ಶಬ್ದಗಳು ನಮಗೆ ದೊರೆಯುತ್ತವೆ. ಆದರಿಂದ, ಒಂದಾನೊಂದು ಕಾಲದಲ್ಲಿ ಈ ಭಾಷೆಗಳೆಲ್ಲವೂ ಒಂದೇ ಆಗಿದ್ದಿರಬೇಕೆಂದು ನಾವು ಹೇಳಬಲ್ಲೆವು. ಫ್ರೆಂಚು ಮತ್ತು ಇಂಗ್ಲಿಷು ಭಾಷೆಗಳಲ್ಲಿ ಈ ತರದ ಸಾಮಾನ್ಯ ಶಬ್ದಗಳು ಹೇರಳವಾಗಿರುವುದನ್ನು ನೀನು ಬಲ್ಲೆಯಷ್ಟೆ? ಮನೆಮಾತುಗಳಲ್ಲಿ ಬಳಕೆಯಲ್ಲಿರುವ ಸಾಮಾನ್ಯ ಶಬ್ದಗಳಾದ 'ಫಾದರ್' ಮತ್ತು 'ಮದರ್' ಶಬ್ದಗಳನ್ನು ಪರೀಕ್ಷಿಸೋಣ. ಸಂಸ್ಕೃತ ಮತ್ತು ಹಿಂದೀ ಭಾಷೆಗಳಲ್ಲಿ ತಂದೆ ತಾಯಿಗಳಿಗೆ 'ಪಿತಾ' 'ಮಾತಾ' ಎನ್ನುವುದು ನಿನಗೆ ಗೊತ್ತಿದೆ. ಲ್ಯಾಟಿನ್ ಭಾಷೆಯಲ್ಲಿ 'ಪ್ಯಾಟರ್' ಮತ್ತು 'ಮ್ಯಾಟರ್' ಎನ್ನುವರು. ಗ್ರೀಕ್ ಭಾಷೆಯಲ್ಲಿ ಹೇಳುವುದು 'ಪೇಟರ್' ಮತ್ತು 'ಮೇಟರ್' ಎಂದು. 'ಫಾತರ್' ಮತ್ತು 'ಮುತ್ತರ್' ಎಂದು ಜರ್ಮನ್ ಭಾಷೆಯಲ್ಲಿ. ಫ್ರೆಂಚ್ ಭಾಷೆಯಲ್ಲಿ 'ಪೆರೆ' ಮತ್ತು 'ಮೆರೆ.' ಉಳಿದ ಎಷ್ಟೋ ಭಾಷೆಗಳಲ್ಲಿಯೂ ಹೀಗೆಯೇ. ಇವೆಲ್ಲ ಶಬ್ದಗಳಲ್ಲಿ ಬಹಳ ಹೋಲಿಕೆ ಇದ್ದುದು ಕಂಡುಬರುವುದಿಲ್ಲವೆ? ಒಂದೇ ಮನೆತನದ ಅಕ್ಕತಂಗಿಯರ ಹೋಲಿಕೆ ಇವುಗಳಲ್ಲಿದೆ. ಒಂದು ಭಾಷೆಯಿಂದ ಇನ್ನೊಂದು ಭಾಷೆಯಲ್ಲಿ ಎಷ್ಟೋ ಶಬ್ದಗಳು ಸೇರಿಕೊಳ್ಳಬಹುದು. ಹೀಗೆಯೇ ಹಿಂದೀ ಭಾಷೆಯಲ್ಲಿ ಇಂಗ್ಲಿಷಿನ ಎಷ್ಟೋ ಶಬ್ದಗಳು ಸೇರಿಕೊಂಡಿವೆ. ಹಿಂದಿಯ ಹಲಕೆಲವು ಶಬ್ದಗಳು ಇಂಗ್ಲಿಷಿನಲ್ಲಿ ಬಳಕೆಗೊಂಡಿವೆ ಆದರೆ ಫಾದರ್ ಮತ್ತು ಮದರ್ ಶಬ್ದಗಳು ಒಂದು ಭಾಷೆಯಿಂದ ಇನ್ನೊಂದು ಭಾಷೆಯಲ್ಲಿ ಸೇರಿರಲಾರವು. ಯಾಕೆಂದರೆ ಅವು ಹೊಸ ಶಬ್ದಗಳಲ್ಲ. ಮನುಷ್ಯರು ತಮ್ಮತಮ್ಮಲ್ಲಿ ಮಾತಾಡಲು ಮೊದಲಿಸಿದಂದಿನಿಂದ ತಂದೆ ತಾಯಂದಿರು ಇದ್ದರು. ಆದುದ ರಿಂದ ಅವರನ್ನು ಕರೆಯಲು ಕೆಲವೊಂದು ಶಬ್ದಗಳು ಬಳಕೆಯಲ್ಲಿದ್ದಿರ ಬಹುದು. ಹೀಗೆ ಈ ಶಬ್ದಗಳು ಬೇರೆ ಕಡೆಯಿಂದ ತೆಗೆದುಕೊಂಡ ಶಬ್ದಗಳಲ್ಲ

ವೆಂದು ಹೇಳಬಹುದು. ಒಂದೇ ಮೂಲ ಭಾಷೆಯಿಂದ ಅಥವಾ ಒಂದೇ ಕುಟುಂಬಕ್ಕೆ ಸೇರಿದ ಭಾಷೆಯಿಂದ ಇವೆಲ್ಲ ಹುಟ್ಟಿರಬೇಕು. ಇದರಿಂದ ನಮಗೆ ತಿಳಿದುಬರುವುದೇನೆಂದರೆ, ಈಗ ಬಹಳ ದೂರ, ಬೇರೆ ಬೇರೆ ದೇಶಗಳಲ್ಲಿದ್ದು ಬೇರೆ ಬೇರೆ ಭಾಷೆಗಳನ್ನಾಡುವ ಜನರು ಒಂದಾನೊಂದು ಕಾಲದಲ್ಲಿ ಒಂದೇ ದೊಡ್ಡ ಮನೆತನದವರಾಗಿರಬೇಕು.

ಭಾಷೆಗಳ ಅಭ್ಯಾಸ ಎಂತಹ ಮನೋರಂಜಕವಾದ ವಿಷಯವಾಗಿದೆ ಯೆಂದೂ ಅದರಿಂದ ನಾವು ಎಷ್ಟು ಕಲಿಯಬಹುದೆಂದೂ ನಿನಗೆ ಗೊತ್ತಾಗ ಬಹುದು. ಮೂರು ಅಥವಾ ನಾಲ್ಕು ಭಾಷೆಗಳನ್ನು ಬಲ್ಲವರಾದರೆ ಹೆಚ್ಚು ಭಾಷೆಗಳನ್ನು ಕಲಿಯುವುದು ನಮಗೆ ಗಹಜವಾಗುವುದಿಲ್ಲ.

ಒಬ್ಬರಿಂದೊಬ್ಬರು ಬಹಳ ದೂರವಾಗಿ ಈಗ ಹಲವು ದೇಶಗಳಲ್ಲಿ ಚದುರಿಹೋದ ನಾವು ಬಹಳ ಹಿಂದಿನ ಕಾಲದಲ್ಲಿ ಒಂದೇ ಜನಾಂಗದವ ರಾಗಿದ್ದಿರಬೇಕೆಂದೂ ನಿನಗೆ ತಿಳಿಯುವುದು. ಅಂದಿನಿಂದ ನಮ್ಮಲ್ಲಿ ಬಹಳ ಮಾರ್ಪಾಟುಗಳಾಗಿವೆ. ನಾವು ನಮ್ಮ ಪೂರ್ವದ ಬಳಗವನ್ನು ಮರೆತು ಬಿಟ್ಟಿದ್ದೇವೆ. ಪ್ರತಿಯೊಂದು ದೇಶದಲ್ಲಿಯ ಜನರು ತಾವೇ ಉತ್ತಮರಾದ ವರೂ, ಬುದ್ಧಿಯುಳ್ಳವರೂ, ಇತರರಿಗಿಂತ ಹೆಚ್ಚಿನವರೂ ಎಂದು ತಿಳಿದು ಕೊಳ್ಳುತ್ತಿರುವರು. ಇಂಗ್ಲಿಷು ಮನುಷ್ಯನು ತಾನು ಮತ್ತು ತನ್ನ ನಾಡು ಉತ್ತಮವಾದುದೆಂದು ತಿಳಿಯುತ್ತಾನೆ. ಫ್ರಾನ್ಸ್ ದೇಶದವನು ತನ್ನ ದೇಶ ಕ್ಕಾಗಿ ಮತ್ತು ಅಲ್ಲಿಯ ಪ್ರತಿಯೊಂದು ಪದಾರ್ಥಕ್ಕಾಗಿ ಹೆಮ್ಮೆಪಡುತ್ತಿರು ತ್ತಾನೆ. ಜರ್ಮನಿ ಮತ್ತು ಇಟಲಿಯವರು ತಮ್ಮ ತಮ್ಮ ದೇಶಗಳನ್ನು ಒಂದೆ ಸಮನೆ ಹೊಗಳಿಕೊಳ್ಳುತ್ತಿದ್ದಾರೆ. ಜಗತ್ತಿನಲ್ಲಿ ಹಿಂದುಸ್ತಾನವೇ ಎಲ್ಲ ಬಗೆಯಿಂದ ಶ್ರೇಷ್ಠವಾದ ದೇಶವೆಂದು ಹಿಂದೀ ಜನರ ತಿಳಿವಳಿಕೆ. ಇದೆಲ್ಲ ಬರಿಯ ಮೋಹ! ತಾನು ಮತ್ತು ತನ್ನ ದೇಶವಷ್ಟೇ ಒಳ್ಳೆಯದೆಂದು ತಿಳಿದುಕೊಳ್ಳಲು ಪ್ರತಿಯೊಬ್ಬನು ಹವಣಿಸುತ್ತಾನೆ. ಆದರೆ ನಿಜವಾಗಿ ಯಾವ ಮನುಷ್ಯನೂ ಸುಗುಣ ದುರ್ಗಣಗಳಿಲ್ಲದವನಲ್ಲ. ಅದರಂತೆಯೆ ಸುಗುಣ ದುರ್ಗುಣಗಳಿಲ್ಲದ ದೇಶವಿಲ್ಲ. ಒಳ್ಳೆಯ ಗುಣ ಎಲ್ಲಿಯೇ ಇರಲಿ, ಅದನ್ನು ತೆಗೆದುಕೊಳ್ಳಬೇಕು; ಕೆಟ್ಟ ಗುಣವಿದ್ದರೆ ಬಿಟ್ಟುಬಿಡಲು ಯತ್ನಿಸ ಬೇಕು. ನಾವು ಹಿಂದುಸ್ತಾನಕ್ಕೆ ವಿಶೇಷವಾಗಿ ಸಂಬಂಧಿಸಿದವರು. ದುರ್ದೈವ ದಿಂದ ಈಗ ಅದು ಕೆಟ್ಟ ಸ್ಥಿತಿಯಲ್ಲಿದೆ. ನಮ್ಮಲ್ಲಿಯ ಬಹು ಜನರು ಬಲು

ಬಡವರಾಗಿ ಗೋಳಾಟದಲ್ಲಿರುವರು ಅವರ ಬಾಳುವೆ ಸುಖವಿಲ್ಲದ ಬಾಳುವೆ ಯಾಗಿದೆ. ಅವರನ್ನು ಹೇಗೆ ಸುಖಿಗಳನ್ನಾಗಿ ಮಾಡಬೇಕೆಂಬುದನ್ನು ನಾವು ಕಂಡುಕೊಳ್ಳಬೇಕು. ನಮ್ಮಲ್ಲಿಯ ಒಳ್ಳೆಯ ನಡವಳಿ, ವಾಡಿಕೆಗಳನ್ನು ತಿಳಿದುಕೊಂಡು ಉಳಿಸಿಕೊಳ್ಳಲು ಯತ್ನಿಸಬೇಕು. ಕೆಟ್ಟವುಗಳನ್ನು ಎಸೆದು ಬಿಡಬೇಕು. ಇತರ ದೇಶಗಳಲ್ಲಿ ಯಾವುದೊಂದು ಸುಗುಣವಿದ್ದುದು ತೋರಿ ಬಂದರೆ ನಾವು ಅದನ್ನು ನಮ್ಮದನ್ನಾಗಿ ಮಾಡಿಕೊಳ್ಳಲಿಬೇಕು.

ನಾವು ಹಿಂದುಸ್ತಾನದಲ್ಲಿರಬೇಕಾದುದು ಹಿಂದುಸ್ತಾನದವರಾಗಿ; ನಾವು ದುಡಿಯಬೇಕಾದುದು ಹಿಂದುಸ್ತಾದವರಾಗಿ. ಆದರೆ, ಜಗತ್ತಿನ ದೊಡ್ಡ ಕುಟುಂಬಕ್ಕೆ ನಾವೂ ಸಂಬಂಧಪಟ್ಟವರು, ಬೇರೆ ಬೇರೆ ದೇಶಗಳ ಜನರಾದರೂ ನಮ್ಮ ಅಣ್ಣತಮ್ಮಂದಿರು ಎಂಬುದನ್ನು ಮರೆಯಲಾಗದು. ಜಗತ್ತಿನಲ್ಲಿಯ ಎಲ್ಲ ಜನರು ಸಂತುಷ್ಟರಾಗಿ ಸುಖದಿಂದ ಬಾಳಿದ್ದರೆ ಎಷ್ಟು ಚೆನ್ನಾಗುತ್ತಿತ್ತು! ಆದುದರಿಂದ ಇಡೀ ಜಗತ್ತನ್ನೇ ಸುಖದ ಬೀಡನ್ನಾಗಿ ಮಾಡಲು ನಾವು ಹವಣಿಸಬೇಕು.

---

## ೧೧

## ನಾಗರಿಕತೆಯೆಂದರೇನು?

ನಾನು ನಿನಗೆ ಪ್ರಾಚೀನ ನಾಗರಿಕತೆಯನ್ನು ಕುರಿತು ಕೆಲವು ಮಾತು ಗಳನ್ನು ಹೇಳಬೇಕೆಂದಿರುವೆನು. ಇದನ್ನು ಹೇಳುವ ಮೊದಲು ನಾಗರಿಕತೆ ಯೆಂದರೇನೆಂಬುದನ್ನು ತಿಳಿದುಕೊಳ್ಳಲು ಹವಣಿಸಬೇಕಾಗಿದೆ. ಶಬ್ದಕೋಶ ದಲ್ಲಿ ನಾಗರಿಕತೆಯ ಅರ್ಥವಿರುವುದು ಸಂಸ್ಕಾರ ಹೊಂದಿದ, ಉತ್ತಮವಾದ, ಸುಧಾರಿಸಿದ, ಕಾಡುನಡತೆಗಳನ್ನು ಬಿಟ್ಟು ಒಳ್ಳೆಯವುಗಳನ್ನು ಅಂಗೀಕರಿಸಿದ ಸ್ಥಿತಿಯೆಂದು. ಇದು ವಿಶೇಷವಾಗಿ ಸಮಾಜ ಅಥವಾ ಜನರ ಗುಂಪಿಗೆ ಅನ್ವಯಿಸುತ್ತದೆ. ಮನುಷ್ಯರು ಪಶುಗಳಿಗಿಂತ ಸ್ವಲ್ಪ ಉತ್ತಮರಾಗಿ, ಆದರೆ ಅನಾಗರಿಕರಾಗಿ, ಇರುವ ಸ್ಥಿತಿಗೇ ಕಾಡುಸ್ಥಿತಿಯೆಂದು ಹೆಸರು. ನಾಗರಿಕತೆ ಈ ಕಾಡುಸ್ಥಿತಿಗೆ ವಿರುದ್ಧವಾದುದು. ಕಾಡುಸ್ಥಿತಿಯಿಂದ ನಾವು ಎಷ್ಟೆಷ್ಟು ದೂರ ಸಾಗಿ ಬರುವೆವೊ ಅಷ್ಟಷ್ಟು ಹೆಚ್ಚಾಗಿ ಸುಸಂಸ್ಕೃತ ರಾಗುವೆವು.

ಆದರೆ ಒಬ್ಬ ಮನುಷ್ಯ ಇಲ್ಲವೆ ಜನಾಂಗವಿರುವ ಸ್ಥಿತಿ ಕಾಡುತನದ್ದೊ ನಾಗರಿಕತನದ್ದೊ ಎಂದು ಕಂಡುಕೊಳ್ಳುವುದು ಹೇಗೆ? ತಾವು ಸುಧಾರಿಸಿದವರೆಂದೂ ಏಷಿಯದ ಜನರು ಸಂಪೂರ್ಣವಾಗಿ ಕಾಡುಸ್ಥಿತಿಯವರೆಂದೂ ಯುರೋಪಿನಲ್ಲಿಯ ಎಷ್ಟೋ ಜನರು ತಿಳಿಯುತ್ತಾರೆ. ಯುರೋಪಿನ ಜನರು ಏಷಿಯ ಮತ್ತು ಆಫ್ರಿಕಾ ಖಂಡಗಳ ಜನರಿಗಿಂತ ಹೆಚ್ಚು ಬಟ್ಟೆಬರೆಗಳನ್ನು ಹಾಕಿಕೊಳ್ಳುತ್ತಾರೆಂದು ಹೀಗೆನ್ನಬಹುದೆ? ಉಡಿಗೆ ತೊಡಿಗೆಗಳು ಗಾಳಿ ಬಿಸಿಲುಗಳನ್ನು ಹೊಂದಿಕೊಂಡಿರುತ್ತವೆ. ಚಳಿನಾಡಿನ ಜನರು ಬಿಸಿಲು ನಾಡಿನ ಜನರಿಗಿಂತ ಹೆಚ್ಚು ಬಟ್ಟೆಬರೆಗಳನ್ನು ಹಾಕಿಕೊಳ್ಳುತ್ತಾರೆ ಕೈಯಲ್ಲಿ ಕೋವಿಯುಳ್ಳವನು ಆಯುಧವಿಲ್ಲದವನಿಗಿಂತ ಬಲಿಷ್ಠನಾಗಿ ಕಂಡುಬರುವನು. ಆದುದರಿಂದ ಅವನು ನಿರಾಯುಧ ಮನುಷ್ಯನಿಗಿಂತ ಹೆಚ್ಚು ಸುಧಾರಿಸಿದವನೆನ್ನಬಹುದೆ? ಅವನು ಒಳ್ಳೇ ನಾಗರಿಕನಿರಲಿ ಇಲ್ಲದಿರಲಿ, ಒಬ್ಬ ಬಲಹೀನನು ಅವನೆದುರಿಗೆ ನಿಂತು "ನೀನು ಅನಾಗರಿಕ"ನೆಂದು ಹೇಳಲು ಬಾಯಿಯೇಳುವುದಿಲ್ಲ. ಹಾಗೆ ಹೇಳಿದರೆ ಅವನು ಗುಂಡಿನೇಟಿಗೆ ತುತ್ತಾಗುವನು.

ಕೆಲವು ವರುಷಗಳ ಹಿಂದೆ ಮಹಾಯುದ್ಧವಾದುದು ನಿನಗೆ ಗೊತ್ತಿದೆ. ಜಗತ್ತಿನೊಳಗಿನ ಬಹುತರ ಎಲ್ಲ ದೇಶಗಳು ಇದರಲ್ಲಿ ತೊಡಗಿದ್ದುವು. ಎದುರು ಪಕ್ಷದ ಎಷ್ಟು ಜನರನ್ನು ಕೊಲ್ಲುವುದು ಸಾಧ್ಯವಿತ್ತೊ, ಅಷ್ಟು ಜನರನ್ನು ಕೊಲ್ಲಲು ಪ್ರತಿಯೊಂದು ದೇಶದವರು ಹೆಣಗಾಡುತ್ತಿದ್ದರು ಇಂಗ್ಲಿಷ ಮನುಷ್ಯನು ಜರ್ಮನಿಯ ಜನರನ್ನು ಕೊಲ್ಲಲು ತನ್ನಿಂದಾದಷ್ಟು ಯತ್ನಿಸುತಿದ್ದನು. ಜರ್ಮನರು ಇಂಗ್ಲಿಷರನ್ನು ಕೊಲ್ಲುತಿದ್ದರು. ಈ ಕಾಳಗದಲ್ಲಿ ಹೀಗೆ ಕೋಟ್ಯವಧಿ ಜನರು ಮಡಿದರು. ಎಷ್ಟೋ ಸಾವಿರ ಜನರು ಕೊನೆತನಕ ಅಂಗಹೀನರಾದರು. ಕೆಲವರು ಕಣ್ಣು ಕಳೆದುಕೊಂಡು ಕುರುಡರಾದರು. ಕೆಲವರಿಗೆ ಕೈಕಾಲುಗಳಿಲ್ಲದಂತಾಯಿತು. ಯುದ್ಧದಲ್ಲಿ ಅಂಗಗಳು ಕಡಿವಡೆದು ಗಾಯಹೊಂದಿದ ಎಷ್ಟೋ ಜನರನ್ನು ಫ್ರಾನ್ಸು ಇಲ್ಲವೆ ಇನ್ನೆಲ್ಲಿಯಾದರೂ ನೀನು ನೋಡಿರಬಹುದು. ಪ್ಯಾರಿಸ್ ಪಟ್ಟಣದಲ್ಲಿ ನೆಲದೊಳಗೆ ಪೋಗುವ "ಮೆಟ್ರೊ" ಉಗೆಬಂಡಿಯಲ್ಲಿ ಇಂತಹ ಜನರಿಗಾಗಿಯೆ ಕುಳ್ಳಿರುವ ಸ್ಥಳಗಳಿವೆ. ಈ ರೀತಿಯಾಗಿ, ಪರರನ್ನು ಕೊಲ್ಲುವುದು ಬಹಳ ಸುಧಾರಿಸಿದವರ ಇಲ್ಲವೆ ಜಾಣರ ಲಕ್ಷಣವೆಂದು ನೀನು ತಿಳಿದಿರು

ವೆಯಾ ? ಓಣಿಯಲ್ಲಿ ಇಬ್ಬರು ಕಡಿದಾಡಿದರೆ ಕಾವಲುಗಾರನು ನಡುವೆ ಬಂದು ಅವರಿಬ್ಬರನ್ನು ಬಿಡಿಸುವನು. ಅವರೆಂತಹ ಮೂರ್ಖರೆಂದು ಪ್ರತಿಯೊಬ್ಬನು ತಿಳಿಯುವನು. ಆದರೆ ದೊಡ್ಡ ದೊಡ್ಡ ದೇಶದವರು ತಮ್ಮ ತಮ್ಮಲ್ಲಿ ಕಾದುತ್ತ ಸಾವಿರಾರು, ಏಕೆ, ಲಕ್ಷಾವಧಿ ಜನರನ್ನು ಕೊಲ್ಲುವುದು ಎಂತಹ ತಿಳಿಗೇಡಿತನದ ಮಾತು! ಇಬ್ಬರುಕಾಡು ಜನರು ಅಡವಿಯಲ್ಲಿ ಕಾದಾಡಿದಂತವಲ್ಲವೆ ಇದು ? ಕಾಡುಜನರಿಗೆ ಕ್ರೂರ ಜನರೆಂದು ಹೆಸರಿಟ್ಟರೆ, ಇದೇ ರೀತಿಯಲ್ಲಿ ವರ್ತಿಸುವ ದೇಶಗಳು ಎಷ್ಟು ಹೆಚ್ಚು ಕ್ರೂರ ಮತ್ತು ಸಂಸ್ಕೃತಿವಿಹೀನವಾಗಿರಲಿಕ್ಕಿಲ್ಲ ?

ಆದುದರಿಂದ ಈ ವಿಷಯದಲ್ಲಿ ಹೀಗೆ ಯೋಚಿಸಿದರೆ ಮಹಾಯುದ್ಧದಲ್ಲಿ ಕಾದಾಡಿ, ಲಕ್ಷಾವಧಿ ಜನರನ್ನು ಕೊಂದ ಇಂಗ್ಲಂಡು, ಜರ್ಮನಿ, ಫ್ರಾನ್ಸ್, ಇಟಲಿ ಮುಂತಾದ ಅನೇಕ ರಾಷ್ಟ್ರಗಳು ಏನೂ ಸುಧಾರಿಸಿದವಲ್ಲವೆಂದು ನೀನು ಹೇಳಬಹುದು. ಹೀಗಿದ್ದರೂ ಈ ದೇಶಗಳಲ್ಲಿ ಒಳ್ಳೆಯ ಎಷ್ಟೋ ಜನರಿರುವರು. ಮತ್ತು ಎಷ್ಟೋ ಉತ್ತಮ ವಸ್ತುಗಳಿರುವುವು. ಇದು ನಿನಗೆ ತಿಳಿದ ಮಾತು.

ಸಂಸ್ಕೃತಿಯೆಂದರೇನೆಂದು ತಿಳಿದುಕೊಳ್ಳುವುದು ಸುಲಭವಲ್ಲವೆಂದು ನಿನ್ನ ಅಭಿಪ್ರಾಯ. ಇದು ಯಥಾರ್ಥವಾದ ಮಾತು. ಇದು ಬಹಳ ತೊಡಕಿನ ಪ್ರಶ್ನೆ. ಸುಂದರವಾದ ಕಟ್ಟಡಗಳು, ಒಳ್ಳೆಯ ಚಿತ್ರಗಳು, ಪುಸ್ತಕಗಳು ಹೀಗೆಯೆ ಚೆಲುವಾದ ಪ್ರತಿಯೊಂದು ಪದಾರ್ಥವೂ ನಿಜವಾಗಿ ಸಂಸ್ಕೃತಿಯ ಗುರುತು. ಇವೆಲ್ಲಕ್ಕಿಂತ ಸ್ವಾರ್ಥವಿಲ್ಲದೆ ಎಲ್ಲರ ಹಿತಕ್ಕಾಗಿ ಪರರೊಂದಿಗೆ ದುಡಿಯುವ ಮನುಷ್ಯನೇ ಸಂಸ್ಕೃತಿಯ ಹೆಗ್ಗುರುತು. ಒಂಟಿಗನಾಗಿ ದುಡಿಯುವುದಕ್ಕಿಂತ ಒಂದಾಗಿ ದುಡಿಯುವುದು ಎಲ್ಲಕ್ಕಿಂತ ಮಿಗಿಲಾದ ಕೆಲಸ.

---

೧೨

# ಬೆಡಗುಗಳಾಗುವುದು

ಮನುಷ್ಯನು ಭೂಮಿಯ ಮೇಲೆ ಮೊದಲು ತಲೆದೋರಿದಾಗ ಬಹು ತರವಾಗಿ ಪಶುವಿನಂತಿದ್ದನೆಂಬುದನ್ನು ನಾನು ನಿನಗೆ ಹಿಂದಿನ ಓಲೆಯಲ್ಲಿ ಹೇಳಿರುವೆನು. ಸಾವಿರಾರು ವರುಷಗಳಲ್ಲಿ ಅವನು ಮೆಲ್ಲಮೆಲ್ಲನೆ ಸುಧಾರಿಸುತ್ತ ನಡೆದನು. ಈಗಿನ ಕಾಲದ ಕಾಡುಮಿಗಗಳಂತೆ ಅವನು ಮೊದಲು ತನಗಾಗಿ ತಾನೇ ಬೇಟೆಯಾಡುತ್ತಿದ್ದಿರಬಹುದು. ಆಮೇಲೆ, ಇತರ ಜನರೊಂದಿಗೆ ಗುಂಪಾಗಿ ತಿರುಗಾಡುವುದು ಹೆಚ್ಚು ಜಾಣತನದ, ಜೋಕೆಯ ಕೆಲಸವೆಂದು ಅವನು ಬಗೆದನು. ಬಹಳ ಜನರು ಗುಂಪುಗಟ್ಟಿಕೊಂಡಿರುವುದರಿಂದ ಅವರ ಬಲವು ಹೆಚ್ಚಿ ಕಾಡುಮಿಗಗಳ ಇಲ್ಲವೆ ಉಳಿದ ಮನುಷ್ಯರ ದಾಳಿಯನ್ನು ತಡೆಯಲು ಅವರು ಶಕ್ತರಾದರು. ಪಶುಗಳು ಕೂಡ ತಮ್ಮ ರಕ್ಷಣೆಗಾಗಿ ಹೀಗೆ ಹಿಂಡುಹಿಂಡಾಗಿ ತಿರುಗಾಡುತ್ತಿರುವವು. ಕುರಿ, ಆಡು, ಚಿಗರೆ ಮತ್ತು ಆನೆಗಳು ಹಿಂಡುಗಟ್ಟಿಕೊಂಡು ತಿರುಗಾಡುತ್ತವೆ. ಹಿಂಡು ಮಲಗಿಕೊಂಡಾಗ ಕೆಲವು ಮಾತ್ರ ಎಚ್ಚರದಿಂದಿದ್ದು ಉಳಿದವುಗಳನ್ನು ಕಾಯುತ್ತಿರುತ್ತವೆ. ತೋಳದ ಹಿಂಡುಗಳ ಕತೆಯನ್ನು ನೀನು ಓದಿರಬಹುದು. ರಷಿಯಾ ದೇಶದಲ್ಲಿ ತೋಳಗಳು ಚಳಿಗಾಲದಲ್ಲಿ ಹಿಂಡುಗೂಡಿ ತಿರುಗುತ್ತಿರುತ್ತವೆ; ಆಗ ಕೂಳಿಲ್ಲದೆ ಬಹಳ ಹೊತ್ತು ಹಸಿದಿರುವದರಿಂದ ಅವು ಮನುಷ್ಯರ ಮೇಲೆ ದಾಳಿಡುತ್ತವೆ. ಒಂದೇ ತೋಳ ಒಬ್ಬನೇ ಮನುಷ್ಯನ ಮೇಲೆ ಎಂದಿಗೂ ಏರಿ ಬರುವುದಿಲ್ಲ. ಆದರೆ ತೋಳದ ಹಿಂಡಿಗೆ ಮಾತ್ರ ಮನುಷ್ಯನ ಗುಂಪಿನ ಮೇಲೆ ದಾಳಿಮಾಡುವಷ್ಟು ಧೈರ್ಯವಾಗುತ್ತದೆ. ಆಗ ಮನುಷ್ಯರು ತಮ್ಮ ಜೀವವನ್ನು ಉಳಿಸಿಕೊಳ್ಳುವುದಕ್ಕಾಗಿ ಓಡಿಹೋಗಬೇಕಾಗುವುದು. ಎಷ್ಟೋ ಸಲ ಮನುಷ್ಯರಿಗೂ ತೋಳಗಳಿಗೂ ಮುಂಜಿನ ಬೈಲಿನಲ್ಲಿ ಮೇಲಾಟವೇ (Race) ಏರ್ಪಟ್ಟಂತಿರುತ್ತದೆ.

ಹೀಗೆ ಗುಂಪು ಕಟ್ಟಿಕೊಂಡು ಕೂಡಿರುವುದೇ ಪೂರ್ವಕಾಲದ ಮನುಷ್ಯನು ನಾಗರಿಕತೆಯ ಮಾರ್ಗದಲ್ಲಿ ಇಟ್ಟ ಮೊದಲನೆ ಹೆಜ್ಜೆ. ಈ ರೀತಿಯ ಗುಂಪುಗಳಿಗೆ ಬೆಡಗುಗಳೆಂದು ಹೆಸರು. ಈ ಜನರು ಒಟ್ಟುಗೂಡಿ ದುಡಿಯತೊಡಗಿದರು. ಸಹಕಾರ ಮೊದಲಾಯಿತು. ಪ್ರತಿಯೊಬ್ಬ

ಮನುಷ್ಯನು ಮೊದಲು ತನ್ನ ಬೆಡಗಿಗಾಗಿ ಯೋಚಿಸುತ್ತಿದ್ದನು. ತನ್ನ ಯೋಚನೆ ಆಮೇಲೆ. ಬೆಡಗು ಸಂಕಟದಲ್ಲಿದ್ದಾಗ ಪ್ರತಿಯೊಬ್ಬನೂ ಅದಕ್ಕಾಗಿ ಕಾದಾಡಿ ಅದನ್ನು ಕಾಪಾಡಬೇಕಾಗುತ್ತಿತ್ತು. ಈ ಬೆಡಗಿನಲ್ಲಿಯ ಯಾವನೊಬ್ಬನು ತನ್ನ ಗುಂಪಿಗಾಗಿ ದುಡಿಯದಿದ್ದರೆ ಅವನನ್ನು ಒದೆದು ಹೊರದೂಡುತ್ತಿದ್ದರು.

ಇನ್ನು ಜನರು ಒಟ್ಟುಗೂಡಿ ದುಡಿಯುವುದಾದರೆ ಅವರು ಸುವ್ಯವಸ್ಥೆಯಿಂದ ಕೆಲಸ ಮಾಡಬೇಕಾಗುತ್ತದೆ. ಪ್ರತಿಯೊಬ್ಬನೂ ತನ್ನ ಮನ ಬಂದಂತೆ ನಡೆದರೆ ಬೆಡಗೇ ಉಳಿಯುವುದಿಲ್ಲ. ಆದುದರಿಂದ ಒಬ್ಬನು. ಮುಂದಾಳಾಗಬೇಕು. ಪಶುಗಳ ಹಿಂಡಿನಲ್ಲಿಯೂ ಮುಂದಾಳುಗಳಿರುತ್ತವೆ. ಮನುಷ್ಯರು ಕೂಡ-ತಮ್ಮ ತಂಡದೊಳಗೆ ಹೆಚ್ಚು ಬಲವುಳ್ಳವನನ್ನು ತಮ್ಮ ಮುಂದಾಳೆಂದು ಆರಿಸಿಕೊಂಡರು. ಆಗಿನ ಕಾಲದಲ್ಲಿ ಕಾದಾಡುವುದೇ ಮುಖ್ಯವಾಗಿದ್ದುದರಿಂದ ಎಲ್ಲರಿಗಿಂತ ಹೆಚ್ಚು ಬಲಿಷ್ಠನಾಗಿದ್ದವನು ನಾಯಕನೆಂದು ಆರಿಸಲ್ಪಡುತ್ತಿದ್ದನು.

ಬೆಡಗಿನ ಜನರು ತಮ್ಮ ತಮ್ಮಲ್ಲಿ ಕಾದಾಡದಂತೆ ಮುಂದಾಳು ನೋಡಿಕೊಳ್ಳುತ್ತಿದ್ದನು. ಆದರೆ ಒಂದು ತಂಡ ಇನ್ನೊಂದು ತಂಡದೊಂದಿಗೆ ಕಾದಾಡುತ್ತಿತ್ತು. ಒಬ್ಬನೇ ಬೇರೊಬ್ಬನ ಸಂಗಡ ಯುದ್ಧಗೈಯುವ ಹಳೆಯ ಪದ್ಧತಿಯಲ್ಲಿ ಇದೊಂದು ಸುಧಾರಣೆಯಾಯಿತು.

ಮೊಟ್ಟಮೊದಲಿನ ತಂಡಗಳು ನಿಜವಾಗಿ ದೊಡ್ಡ ಕುಟುಂಬಗಳಾಗಿ ಇದ್ದಿರಬೇಕು. ಕುಟುಂಬದ ಎಲ್ಲ ಜನರು ಪರಸ್ಪರರಲ್ಲಿ ಸಂಬಂಧವುಳ್ಳವರಾಗಿರಬೇಕು. ಆದರೆ ಕುಟುಂಬಗಳು ಬೆಳೆಬೆಳೆದು ಕೊನೆಗೆ ದೊಡ್ಡದೊಂದು ಬೆಡಗಾಯಿತು

ಬೆಡಗುಗಳಾಗುವ ಮೊದಲು ಆ ಹಿಂದಿನ ಕಾಲದ ಮನುಷ್ಯನ ಬಾಳುವೆ ಕಷ್ಟಮಯವಾಗುತ್ತಿತ್ತು. ಅವನಿಗೆ ಇರಲು ಮನೆ ಇಲ್ಲ. ತೊಗಲುಡಿಗೆಯಲ್ಲದೆ ಬೇರೆ ಬಟ್ಟೆಬರೆಗಳಿರಲಿಲ್ಲ. ಅವನು ಯಾವಾಗಲೂ ಕಾಳಗವಾಡುವುದರಲ್ಲಿ ತೊಡಗಿರುತ್ತಿದ್ದನು. ದಿನದ ಆಹಾರಕ್ಕಾಗಿ ಅವನು ಬೇಟೆಯಾಡಿ ಪಶುಗಳನ್ನು ಕೊಲ್ಲಬೇಕಾಗಿತ್ತು. ಇಲ್ಲವೆ ಹಣ್ಣುಹಂಪಲುಗಳನ್ನು ಕಲೆಹಾಕಬೇಕಾಗಿತ್ತು. ಎಲ್ಲೆಡೆಯಲ್ಲಿಯೂ ತನಗೆ ಹಗೆಗಳಿರುವರೆಂದು ಅವನಿಗೆ ತೋರಿದ್ದಿರಬೇಕು ಮಂಜು ಮತ್ತು ಆಣೆಕಲ್ಲುಗಳು

ಬೀಳುವುದು, ಭೂಮಿ ಅದರುವುದು ಮುಂತಾದವುಗಳಿಂದ ಅವನಿಗೆ ಸೃಷ್ಟಿಯೂ ಹಗೆಯಂತೆ ಕಾಣುತ್ತಿತ್ತು. ಆಗಿನ ಮಾನವನು ಪ್ರತಿಯೊಂದಕ್ಕೂ ಹೆದರುತ್ತಿರುವ, ಅಂಜಿಗಾಲಿಕ್ಕುತ್ತಿರುವ, ಜಗತ್ತಿನೊಳಗಿನ ಬಡಪಾಸನಾಗಿದ್ದನು. ಏಕೆಂದರೆ ಅವನಿಗೆ ಏನೂ ತಿಳಿಯುತ್ತಿರಲಿಲ್ಲ. ಆಣೆಕಲ್ಲು ಬೀಳುತ್ತಿದ್ದರೆ ಮೋಡಗಳಲ್ಲಿಯ ಯಾವುದೊ ಒಂದು ದೇವತೆ ತನ್ನನ್ನು ಹೊಡೆಯಲು ಹವಣಿಸುತ್ತಿರುವುದೆಂದು ಅವನು ತಿಳಿದುಕೊಳ್ಳುತ್ತಿದ್ದನು. ಆಗ ಅವನು ಭಯಗೊಂಡು ಮಳೆ, ಮಂಜು, ಆಣೆಕಲ್ಲುಗಳನ್ನು ಸುರಿಸುವ ಮೋಡದಲ್ಲಿಯ ಮನುಷ್ಯನನ್ನು ಸಂತೋಷಗೊಳಿಸಬೇಕೆನ್ನುತ್ತಿದ್ದನು. ಅವನನ್ನು ಸಂತೋಷಗೊಳಿಸುವ ಬಗೆ ಹೇಗೆ? ಈ ನಮ್ಮ ಮನುಷ್ಯನಿಗೆ ನಿಚ್ಚಳವಾದ ತಿಳಿವಳಿಕೆ ಇದ್ದಿಲ್ಲ. ಮೋಡದಲ್ಲಿಯ ದೇವತೆ ತನ್ನಂತೆ ಇದ್ದು ಅನ್ನವನ್ನು ಬಯಸುತ್ತಿರುವುದೆಂದು ಅವನು ತಿಳಿದಿರಬೇಕು. ಇದಕ್ಕಾಗಿಯೆ ಅವನು ಪಶುವನ್ನಾಗಲಿ ಮಾಂಸವನ್ನಾಗಲಿ ಬಲಿಗೊಡುತ್ತಿದ್ದನು! ಈ ದೇವತೆ ತಿನ್ನಬೇಕೆಂದು ಅದನ್ನು ಎಲ್ಲಿಯಾದರೂ ಇಡುತ್ತಿದ್ದನು. ಹೀಗೆ ಮಳೆ ಸುರಿಯುವುದನ್ನೂ ಆಣೆಕಲ್ಲು ಬೀಳುವುದನ್ನೂ ನಿಲ್ಲಿಸುವುದು ಸಾಧ್ಯವೆಂದು ಅವನ ತಿಳಿವಳಿಕೆಯಾಗಿತ್ತು.

ಮಳೆ, ಮಂಜು, ಆಣೆಕಲ್ಲುಗಳು ಏಕೆ ಬೀಳುತ್ತವೆಂದು ನಮಗೆ ಗೊತ್ತಿರುವುದು. ಆದುದರಿಂದ ಇದು ಎಂತಹ ಮರುಳುತನವೆಂದು ನಮಗೆ ಕಂಡುಬರುವುದು. ಅದಕ್ಕೂ ಪಶುಗಳನ್ನು ಕೊಲ್ಲುವುದಕ್ಕೂ ಏನೂ ಸಂಬಂಧವಿಲ್ಲ. ಆದರೆ ಇಂತಹ ಕೃತಿಗಳನ್ನು ಮಾಡುವುದು ತಿಳಿಗೇಡಿತನವಾದರೂ ಎಷ್ಟೋ ಮೂಢ ಜನರು ಇಂದಿಗೂ ಮಾಡುತ್ತಿರುವರು.

---

## ೧೩

# ಧರ್ಮದ ಉದಯ ಮತ್ತು ಕ್ರಮವಿಭಾಗ

ಹಿಂದಿನ ಕಾಲದ ಮನುಷ್ಯರು ಪ್ರತಿಯೊಂದು ಪದಾರ್ಥಕ್ಕೆ ಹೇಗೆ ಭಯಪಡುತ್ತಿದ್ದರು; ಪ್ರತಿಯೊಂದು ಕುತ್ತು, ಅಸೂಯಾಪರರಾದ, ಸಿಟ್ಟಿನ ದೇವತೆಗಳಿಂದ ಬರುತ್ತದೆಂದು ಹೇಗೆ ತಿಳಿದುಕೊಳ್ಳುತ್ತಿದ್ದರು; ಎಂದು ನಾನು ಹಿಂದಿನ ಕಾಗದದಲ್ಲಿ ತಿಳಿಸಿರುವೆನು. ಇವರಿಗೆ ಈ ಕಾಲ್ಪನಿಕ

ದೇವತೆಗಳು ಅಡವಿ, ಗುಡ್ಡ, ಹೊಳೆ, ಮೋಡ ಮುಂತಾದ ಎಲ್ಲ ಕಡೆಗಳಲ್ಲಿಯೂ ಕಾಣುತ್ತಿದ್ದವು. ದೇವತೆ ದಯೆಯುಳ್ಳವನೂ ಒಳ್ಳೆಯವನೂ ಆಗಿರದೆ, ಮಾತುಮಾತಿಗೆ ಯಾವಾಗಲೂ ಮುನಿಸುಗೊಳ್ಳುವನೆಂದು ಅವರ ತಿಳಿವಳಿಕೆ. ಅವನ ಸಿಟ್ಟಿಗೆ ಇವರು ಬೆದರಿ ಬೀಳುತ್ತಿದ್ದರು. ಆದುದರಿಂದ ಈ ದೇವತೆಗೆ ಏನಾದರೂ ಲಂಚಗೂಳನ್ನು ಕೊಟ್ಟು ಸಮಾಧಾನಪಡಿಸಬೇಕೆಂದು ಯತ್ನಿಸುತ್ತಿದ್ದರು. ಕೆಲವೊಮ್ಮೆ ಭೂಕಂಪ, ಜಲಪ್ರಳಯ ಅಥವಾ ಅಂಟುರೋಗಗಳ ಹಾವಳಿಯಿಂದ ಬಹಳ ಜನರು ಮಡಿದರೆ, ದೇವತೆಗಳು ಸಿಟ್ಟಾಗಿರುವರೆಂದು ಬಹಳ ಹೆದರುತ್ತಿದ್ದರು. ಈ ದೇವತೆಗಳನ್ನು ಶಾಂತಗೊಳಿಸಲು ಈ ಜನರು ಗಂಡಸರನ್ನೂ, ಹೆಂಗಸರನ್ನೂ, ಕೆಲವೊಮ್ಮೆ ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ಕೂಡ ಕಡಿದು ಬಲಿಗೊಡಲು ಹಿಂಜರಿಯುತ್ತಿದ್ದಿಲ್ಲ. ಇದು ಭಯಂಕರವೆಂದು ನಮಗೆ ಕಾಣಬಹುದು. ಆದರೆ ಭಯಗೊಂಡವನು ಏನನ್ನು ಮಾಡಲಾರನು ?

ಧರ್ಮದ ಕಲ್ಪನೆಯ ಮೊದಲಿಕೆ ಇದೇ ಆಗಿರಬಹುದು. ಹೀಗೆ ಭಯವೇ ಧರ್ಮಕ್ಕೆ ಕಾರಣವಾಯಿತು. ಭಯದಿಂದ ಮಾಡಿದ ಕೆಲಸಗಳೆಲ್ಲವೂ ಕೆಟ್ಟವೇ. ಧರ್ಮ ನಮಗೆ ಒಳ್ಳೆಯ ಅನೇಕ ಸಂಗತಿಗಳನ್ನು ತಿಳಿಸುತ್ತಿರುವುದು ನಿನಗೆ ಗೊತ್ತಿದೆ. ನೀನು ದೊಡ್ಡವಳಾದಮೇಲೆ ಜಗತ್ತಿನ ಧರ್ಮಗಳನ್ನು ಕುರಿತೂ, ಧರ್ಮಗಳ ನೆವದಿಂದ ನಡೆದ ಒಳ್ಳೆಯ ಮತ್ತು ಕೆಟ್ಟ ಕೃತಿಗಳನ್ನು ಕುರಿತೂ, ಓದಿಕೊಳ್ಳಬೇಕು. ಧರ್ಮದ ಮೂಲ ಕಲ್ಪನೆ ಹೇಗೆ ಪ್ರಾರಂಭವಾಯಿತೆಂಬುದನ್ನು ತಿಳಿದುಕೊಳ್ಳುವುದು ಮನೋಹರವಾದ ವಿಷಯ. ಅದು ಹೇಗೆ ಬೆಳೆಯಿತೆಂಬುದನ್ನು ಮುಂದೆ ನೋಡಿಕೊಳ್ಳೋಣ. ಧರ್ಮದ ಕಲ್ಪನೆ ಎಷ್ಟು ಬೆಳೆದರೂ ಧರ್ಮದ ಹೆಸರಿನಿಂದ ಜನರು ತಮ್ಮ-ತಮ್ಮಲ್ಲಿ ಕಚ್ಚಾಡುವುದನ್ನು, ಒಬ್ಬರ ತಲೆಯನ್ನು ಇನ್ನೊಬ್ಬರು ಒಡೆಯುವುದನ್ನು ನಾವು ಇಂದಿಗೂ ನೋಡುತ್ತೇವೆ. ಎಷ್ಟೋ ಜನರಿಗೆ ಧರ್ಮವೆಂದರೆ ಈಗಲೂ ಹೆದರಿಕೆಯ ಮಾತಾಗಿದೆ. ಇಂಥವರು ಯಾವುವೊ ಕಾಲ್ಪನಿಕ ದೇವತೆಗಳಿಗಾಗಿ ಗುಡಿಗುಂಡಾರ, ಮಸೀದೆಗಳಲ್ಲಿ ನೈವೇದ್ಯಗಳನ್ನು ಅರ್ಪಿಸುತ್ತ ಇಲ್ಲವೆ ಪಶುಗಳನ್ನು ಬಲಿಗೊಡುತ್ತ ಕಾಲಕಳೆಯುವರು.

ಹೀಗೆ ಪೂರ್ವಕಾಲದ ಮನುಷ್ಯನ ಬದುಕು ಕಷ್ಟಮಯವಾಗಿತ್ತು. ತನ್ನ ಆಹಾರವನ್ನು ಪ್ರತಿದಿನವೂ ಅವನು ದೊರಕಿಸಬೇಕಾಗಿತ್ತು ಇಲ್ಲ

ದಿದ್ದಲ್ಲಿ ಉಪವಾಸ ಬೀಳಬೇಕಾಗಿತ್ತು. ಆಗಿನ ಕಾಲದಲ್ಲಿ ಸೋಮಾರಿಗೆ ಬದುಕಿ ಬಾಳಲು ಎಡೆಯಿದ್ದಿಲ್ಲ. ಬಹಳ ತಿನಿಸುಗಳನ್ನು ಕೂಡಿಟ್ಟು ಆಮೇಲೆ ಎಷ್ಟೋ ಕಾಲದ ವರೆಗೆ ಏನೂ ಮಾಡದೆ ಸುಮ್ಮನೆ ಕುಳಿತುಕೊಳ್ಳುವುದು ಎಂತಹನಿಗಾದರೂ ಆಗ ಅಶಕ್ಯದ ಮಾತಾಗಿತ್ತು.

ತಂಡದ ರಚನೆಯಾದ ಕೂಡಲೇ ಮನುಷ್ಯನ ಬಾಳುವೆ ಸ್ವಲ್ಪ ಸುಲಭ ವಾಯಿತು. ಒಂಟಿಗನಾಗಿ ಅನ್ನವನ್ನು ದೊರಕಿಸುವುದಕ್ಕಿಂತ ತಂಡದ ಜನರೆಲ್ಲರೂ ಒಟ್ಟುಗೂಡಿ ದುಡಿಯುವುದರಿಂದ ಆಹಾರದ ಸಂಪಾದನೆ ಹೆಚ್ಚಾಯಿತು. ಒಬ್ಬನಿಂದಾಗದಂತಹ ಎಷ್ಟೊ ಕೆಲಸಗಳನ್ನು ಒಟ್ಟುಗೂಡಿ ದುಡಿಯುವುದರಿಂದ ಅಥವಾ ಸಹಕಾರದಿಂದ ನೀಗಿಸಲು ಅನುವಾಗುತ್ತದೆ ಒಬ್ಬಿಬ್ಬರು ಬಹಳ ಹೊರೆಯನ್ನು ಹೊತ್ತುಕೊಂಡು ಹೋಗಲಾರರು. ಆದರೆ ಬಹಳ ಜನರು ಒಬ್ಬರಿಗೊಬ್ಬರು ನೆರವಾಗಿ ಅದನ್ನು ಬಹಳ ಸುಲಭವಾಗಿ ಒಯ್ಯಬಲ್ಲರು. ಈಗಾಗಲೇ ನಾನು ನಿನಗೆ ಹೇಳಿರುವ ಪ್ರಗತಿಯೊಂದು ಆಗಿನ ಕಾಲದಲ್ಲಿ ಉಂಟಾಯಿತು. ಅದು ಒಕ್ಕಲುತನ. ಕೆಲ ಇರುವೆಗಳಲ್ಲಿ ಒಕ್ಕಲುತನದ ಪ್ರಾರಂಭಾವಸ್ಥೆ ಇದ್ದುದನ್ನು ನೋಡಿ ಸೋಜಿಗವೆನಿಸ ಬಹುದು. ಎಂದರೆ, ಇರುವೆಗಳು ಬೀಜವನ್ನು ಬಿತ್ತುತ್ತವೆ, ನೇಗಿಲು ಹೊಡೆ ಯುತ್ತವೆ, ಸುಗ್ಗಿಯಲ್ಲಿ ರಾಶಿ ಮಾಡುತ್ತವೆ ಎಂದು ನನ್ನ ಅಭಿಪ್ರಾಯವಲ್ಲ. ಈ ಇರುವೆಗಳು ಸ್ವಲ್ಪಮಟ್ಟಿಗೆ ಇಂತಹ ಕೆಲಸವನ್ನೆ ಮಾಡುತ್ತವೆ. ತಾವು ತಿನ್ನುವ ಬೀಜದ ಹುಲ್ಲು ದೊರೆತರೆ, ಅವು ಜಾಗರೂಕತೆಯಿಂದ ಆ ಹುಲ್ಲಿನ ಸುತ್ತ-ಮುತ್ತಲಿನ ಸದೆಯನ್ನು ತೆಗೆಯುತ್ತವೆ. ಇದರಿಂದ ಸಸಿಗೆ ಬದುಕಿರಲು ಹೆಚ್ಚು ಅನುವು ದೊರೆಯುತ್ತದೆ.

ಇರುವೆಗಳಂತೆ ಒಂದಾನೊಂದು ಕಾಲದಲ್ಲಿ ಮನುಷ್ಯನೂ ಮಾಡು ತ್ತಿದ್ದಿರಬಹುದು. ಆಗ ಅವನಿಗೆ ಒಕ್ಕಲುತನ ಗೊತ್ತಿರಲಿಲ್ಲ. ಅದನ್ನು ತಿಳಿದುಕೊಂಡು ಬಿತ್ತುವುದನ್ನು ಮೊದಲಿಸಲು ಅವನಿಗೆ ಎಷ್ಟೋ ಕಾಲ ಬೇಕಾಗಿದ್ದಿರಬಹುದು.

ಒಕ್ಕಲುತನ ಮೊದಲಾದಂದಿನಿಂದ ಆಹಾರವನ್ನು ದೊರಕಿಸುವುದು ಇನ್ನೂ ಸುಲಭವಾಯಿತು. ಆಹಾರಕ್ಕಾಗಿ ದಿನವೆಲ್ಲ ಬೇಟೆಯಾಡುವುದು ತಪ್ಪಿಹೋಯಿತು. ಮನುಷ್ಯರು ಬಾಳುವೆಗಾಗಿ ಪಡುತ್ತಿದ್ದ ಕಷ್ಟ ಕಡಿಮೆ ಯಾಯಿತು. ಈಗ ಮನೋರಂಜಕವಾದ ಇನ್ನೊಂದು ಬದಲಾವಣೆ

ಯಾಯಿತು. ಒಕ್ಕಲುತನಕ್ಕಿಂತ ಮೊದಲು ಪ್ರತಿಯೊಬ್ಬನು ಬೇಟೆಗಾರ ನಾಗಿದ್ದನು. ಗಂಡಸರು ಮಾಡುತ್ತಿದ್ದ ಕೆಲಸ ಅದೊಂದೆ. ಹೆಂಗಸರು ಬಹುತರವಾಗಿ ಮಕ್ಕಳನ್ನು ಸಲಹುತ್ತಿದ್ದರು; ಹಣ್ಣು ಹಂಪಲುಗಳನ್ನು ತರುತ್ತಿದ್ದರು. ಒಕ್ಕಲುತನ ಮೊದಲಾದಂದಿನಿಂದ ಬೇರೆ ಬೇರೆ ತರದ ಕೆಲಸಗಳುಂಟಾದವು. ಹೊಲಗಳಲ್ಲಿ ದುಡಿಯುವುದು, ಬೇಟೆಯಾಡುವುದು, ದನಗಳನ್ನು ಕಾಯುವುದು ಇವೇ ಆ ಕೆಲಸಗಳು. ಹೆಂಗಸರು ಬಹುತರವಾಗಿ ದನಗಳನ್ನು ಕಾಯುವ ಮತ್ತು ಹಾಲು ಹಿಂಡುವ ಕೆಲಸಗಳನ್ನು ಮಾಡುತ್ತಿದ್ದಿರಬಹುದು. ಕೆಲವು ಗಂಡಸರು ಒಂದು ತರದ ಕೆಲಸವನ್ನು ಮಾಡಿದರೆ ಇನ್ನೂ ಕೆಲವರು ಇನ್ನೊಂದು ಹೋರೆಯನ್ನು ಮಾಡುತ್ತಿದ್ದರು.

ಈಗ ಜಗತ್ತಿನಲ್ಲಿ ಒಬ್ಬೊಬ್ಬನು ಒಂದೊಂದು ಹೋರೆಯನ್ನು ಮಾಡುವುದು ನಿನಗೆ ಕಂಡುಬರುವುದು. ಒಬ್ಬನು ವೈದ್ಯನಾಗಿರುವನು. ಇನ್ನೊಬ್ಬನು ದಾರಿಗಳನ್ನು ಇಲ್ಲವೆ ಸೇತುವೆಗಳನ್ನು ಕಟ್ಟುವ ಯಂತ್ರಶಾಸ್ತ್ರಜ್ಞನಾಗಿರುವನು. ಇದರಂತೆಯೆ ಬಡಿಗ, ಕಮ್ಮಾರ, ಕಲ್ಲುಕುಟಿಗ, ಗೋಡೆಗಾರ, ಸಮ್ಮಗಾರ, ಸಿಂಪಿಗ ಮುಂತಾದವರಿರುವರು. ಪ್ರತಿಯೊಂದು ಕೈಗಾರಿಕೆಯವನು ತನ್ನ ಉದ್ಯೋಗದಲ್ಲಿಯೆ ತೊಡಗಿರುವನು. ಇವನಿಗೆ ಉಳಿದ ಕೈಗಾರಿಕೆಗಳ ಬಗೆಗೆ ಏನೂ ಗೊತ್ತಿರುವುದಿಲ್ಲ. ಇದಕ್ಕೆ ಶ್ರಮವಿಭಾಗವೆನ್ನುವರು. ಒಬ್ಬನು ಹಲವಾರು ಕೈಗಾರಿಕೆಗಳನ್ನು ಮಾಡುವುದಕ್ಕಿಂತ ಒಂದೇ ಉದ್ಯೋಗವನ್ನು ಮಾಡಲೆತ್ನಿಸಿದರೆ ನಿಪುಣನಾಗುವನು. ಈಗಿನ ಕಾಲದಲ್ಲಿ ಜಗತ್ತಿನಲ್ಲಿ ಶ್ರಮವಿಭಾಗವೇ ಕಂಡುಬರುವುದು.

ಒಕ್ಕಲುತನದ ಮೊದಲಿಕೆಯಾದಂದಿನಿಂದ ಪ್ರಾಚೀನ ಮನುಷ್ಯರ ತಂಡಗಳಲ್ಲಿ ಈ ಶ್ರಮವಿಭಾಗ ಮೆಲ್ಲಮೆಲ್ಲನೆ ತಲೆದೋರಿದ್ದು ನಮಗೆ ತಿಳಿಯುತ್ತದೆ.

---

೧೪

## ಒಕ್ಕಲುತನದಿಂದ ಉಂಟಾದ ಮಾರ್ಪಾಟುಗಳು

ಶ್ರಮವಿಭಾಗವನ್ನು ಕುರಿತು ಕೆಲವು ಮಾತುಗಳನ್ನು ಹಿಂದಿನ ಪತ್ರದಲ್ಲಿ ನಾನು ನಿನಗೆ ಹೇಳಿರುವೆನು. ಪ್ರಾರಂಭದಲ್ಲಿ, ಮನುಷ್ಯರು ಬರಿಯ

ಬೇಟೆಯಿಂದ ಜೀವಿಸುತ್ತಿದ್ದಾಗ ಶ್ರಮವಿಭಾಗವಿದ್ದಿಲ್ಲ. ಪ್ರತಿಯೊಬ್ಬನು ಬೇಟೆಯಾಡುತ್ತಿದ್ದನು. ಅವನಿಗೆ ಸಾಕಾಗುವಷ್ಟು ಆಹಾರ ಬಹಳ ಶ್ರಮದಿಂದ ದೊರೆಯುತ್ತಿತ್ತು. ಮೊಟ್ಟಮೊದಲು ದುಡಿತದ ಹಂಚಿಕೆ ಹೆಂಗುಸು ಮತ್ತು ಗಂಡಸಿನಲ್ಲಿ ಆಗಿರಬೇಕು. ಎಂದರೆ ಗಂಡಸರು ಬೇಟೆಯಾಡತ್ತಿದ್ದರು. ಹೆಂಗಸರು ಮನೆಯಲ್ಲಿದ್ದು ದನಗಳನ್ನೂ ಮಕ್ಕಳನ್ನೂ ಸಲಹುತ್ತಿದ್ದರು.

ಜನರು ಒಕ್ಕಲುತನವನ್ನು ಕಲಿತ ನಂತರ ಎಷ್ಟೋ ಹೊಸ ಬೆಳವಣಿಗೆಗಳಾದವು. ಮೊಟ್ಟಮೊದಲು ಶ್ರಮವಿಭಾಗದಲ್ಲಿ ಇನ್ನೂ ಹೆಚ್ಚಿನ ಹಂಚಿಕೆಯಾಯಿತು. ಕೆಲವರು ಬೇಟೆಯಾಡುತ್ತಿದ್ದರು; ಕೆಲವರು ಹೊಲಗಳನ್ನು ಕಾಯುತ್ತ ನೇಗಿಲು ಹೊಡೆಯುತ್ತಿದ್ದರು. ಮುಂದೆ ಕಾಲಕಳೆದಂತೆ, ಜನರು ಹೊಸ ಹೊಸ ಕೈಗಾರಿಕೆಗಳನ್ನು ಕಲಿತು ಅವುಗಳಲ್ಲಿ ನಿಪುಣರಾದರು.

ಭೂಮಿಯನ್ನು ಉಳುವುದರಿಂದ ಉಂಟಾದ ಇನ್ನೊಂದು ಮಹತ್ವದ, ವಿಲಕ್ಷಣ, ಪರಿಣಾಮವೆಂದರೆ ಜನರು ಊರುಗಳಲ್ಲಿ ನೆಲೆ ನಿಲ್ಲತೊಡಗಿದರು. ಒಕ್ಕಲುತನಕ್ಕಿಂತ ಮೊದಲು ಜನರು ಬೇಟೆಯಾಡುತ್ತ ಕಂಡಕಡೆ ಅಲೆದಾಡುತ್ತಿದ್ದರು. ಒಂದೇ ಸ್ಥಳದಲ್ಲಿರುವ ಅವಶ್ಯಕತೆ ಅವರಿಗೆ ಇರಲಿಲ್ಲ. ಹೋದಲ್ಲೆಲ್ಲ ಬೇಟೆಯಾಡಲು ಅವರಿಗೆ ಸಾಧ್ಯವಿತ್ತು. ತಮ್ಮಲ್ಲಿದ್ದ ಆಕಳು, ಕುರಿ, ಮತ್ತು ಇತರ ಪ್ರಾಣಿಗಳ ಸಲುವಾಗಿ ಮೇಲಿಂದ ಮೇಲೆ, ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಬೇಕಾಗುತ್ತಿತ್ತು ಈ ದನಗಳು ಮೇಯುವುದಕ್ಕಾಗಿ ಹುಲ್ಲುನೆಲ ಬೇಕಾಗುತ್ತಿತ್ತು. ದನಗಳು ಕೆಲವು ಕಾಲದವರೆಗೆ ಒಂದು ಸ್ಥಳದಲ್ಲಿ ಮೇಯ್ದ ನಂತರ, ಆ ಭೂಮಿಯಲ್ಲಿ ಇವುಗಳಿಗೆ ಸಾಕಾಗುವಷ್ಟು ಹುಲ್ಲು ಬೆಳೆಯುತ್ತಿದ್ದಿಲ್ಲ. ಆದುದರಿಂದ ಇಡೀ ತಂಡಕ್ಕೆ ತಂಡವೇ ಬೇರೊಂದೆಡೆಗೆ ಹೋಗಬೇಕಾಗುತ್ತಿತ್ತು.

ಒಕ್ಕಲುತನ ಮೊದಲಾದಂದಿನಿಂದ ಜನರು ಸಾಗುವಳಿಯಾದ ಭೂಮಿಯ ಹತ್ತಿರ ಇರಬೇಕಾಯಿತು. ಅದನ್ನು ಬಿಟ್ಟು ಅವರು ಹೋಗುವಂತಿರಲಿಲ್ಲ. ಆದುದರಿಂದ ಅವರು ಸುಗ್ಗಿಯಿಂದ ಸುಗ್ಗಿಯವರೆಗೆ ಅಲ್ಲಿಯೆ ದುಡಿಯತೊಡಗಿದರು. ಹೀಗೆ ಊರುಗಳೂ ಪಟ್ಟಣಗಳೂ ಬೆಳೆದವು.

ಒಕ್ಕಲುತನದಿಂದುಂಟಾದ ಮತ್ತೊಂದು ದೊಡ್ಡ ಮಾರ್ಪಾಟೆಂದರೆ, ಅದರಿಂದ ಜೀವನ ಸುಲಭವಾಯಿತು. ಯಾವಾಗಲೂ ಬೇಟೆಯಾಡುವುದ

ಕ್ಕಿಂತ ಒಕ್ಕಲುತನದಿಂದ ಆಹಾರ ಬೆಳೆಸುವುದು ಹೆಚ್ಚು ಸುಲಭವಾಯಿತು. ಒಂದು ಹೊತ್ತಿಗೆ ಬೇಕಾದುದಕ್ಕಿಂತ ಹೆಚ್ಚು ಆಹಾರ ಭೂಮಿಯಿಂದ ದೊರೆಯತೊಡಗಿತು. ಅದನ್ನು ಜೋಕೆಯಿಂದ ಇಡತೊಡಗಿದರು.

ಈಗ ನಾವು ವಿಲಕ್ಷಣವಾದ ಬೆಳಿಗೆಯನ್ನು ಕಾಣುತ್ತೇವೆ. ಮನುಷ್ಯನು ಬರಿಯ ಬೇಟೆಗಾರನಾಗಿದ್ದಾಗ ಅವನಿಂದ ಏನೂ ಉಳಿಯಿಡಲಾಗುತ್ತಿದ್ದಿಲ್ಲ. ಉಳಿಯಿಟ್ಟರೂ ಅದು ತೀರ ಕಡಿಮೆ ಪ್ರಮಾಣದಿಂದ. ಅವರು ಹೊಟ್ಟೆ ಬಟ್ಟೆಗೆ ಸಾಕಾಗುವಷ್ಟನ್ನು ಮಾತ್ರ ಗಳಿಸಿ ಬಾಳಬೇಕಾಗುತ್ತಿತ್ತು. ಹಣವನ್ನು ಇಲ್ಲವೆ ಬೇರೆ ಪದಾರ್ಥವನ್ನು ಉಳಿಯಿಡಲು ಅವನಿಗೆ ಯಾವ ಕುಸೀದವೂ ಇರಲಿಲ್ಲ. ದಿನದಿನದ ಅನ್ನವನ್ನು ಅವನು ಬೇಟೆಯಿಂದಲೇ ಸಂಪಾದಿಸಬೇಕಾಗುತ್ತಿತ್ತು. ಒಕ್ಕಲುತನದ ಆರಂಭದಿಂದ ಒಂದು ದಿನಕ್ಕೆ ಬೇಕಾದುದಕ್ಕಿಂತ ಹೆಚ್ಚಾದ ಕಾಳುಕಡಿ ಅವನಿಗೆ ಭೂಮಿಯಿಂದ ದೊರೆಯತೊಡಗಿತು. ಈ ಮಿಕ್ಕ ಸಂಗ್ರಹವನ್ನು ಅವನು ಕಾಯ್ದಿಡುತ್ತಿದ್ದನು ಸಂಗ್ರಹ ಮಾಡುವುದು ಇಲ್ಲಿಂದಲೇ ಮೊದಲಾಯಿತು. ಬೇಕಾದುದಕ್ಕಿಂತ ಸ್ವಲ್ಪ ಹೆಚ್ಚಾಗಿ ದುಡಿಯುತ್ತಿದುದರಿಂದ ಜನರಿಗೆ ಈ ಉಳಿತಾಯವಾಗತೊಡಗಿತು.

ಈಗಿನ ಕಾಲದಲ್ಲಿ ಬ್ಯಾಂಕುಗಳಿವೆ. ಜನರು ಈ ಕುಸೀದಗಳಲ್ಲಿ ಹಣವನ್ನು ಇಡಪಿಡುವರು. ಮತ್ತು ಹುಂಡಿಗಳ-ಚೆಕ್ಕುಗಳ-ಮೂಲಕ ಅದನ್ನು ಪಡೆಯುವರು. ಇದೆಲ್ಲ ನಿನಗೆ ತಿಳಿದ ಮಾತು. ಈ ಹಣ ಎಲ್ಲಿಂದ ಬರುವುದು ನಿನಗೆ ಗೊತ್ತಿದೆಯೆ? ಇದನ್ನೆಲ್ಲ ಪರ್ಯಾಲೋಚಿಸಿದರೆ ಈ ಎಲ್ಲ ದುಡ್ಡು ಹೆಚ್ಚಿನ ಉಳಿತಾಯವೆಂದು ಕಂಡುಬರುವುದು. ಎಂದರೆ, ಜನರು ಇದನ್ನೆಲ್ಲ ಒಮ್ಮೆಲೇ ವೆಚ್ಚಮಾಡಬಯಸುವದಿಲ್ಲ. ಆದುದರಿಂದ ಇದನ್ನು ಕುಸೀದಕಗಳಲ್ಲಿಡುತ್ತಾರೆ. ಯಾರು ಬಹಳ ಹಣವನ್ನು ಉಳಿಯಿಡುವರೋ ಅವರೇ ಇಂದಿನ ಶ್ರೀಮಂತರು. ಏನೂ ಇಲ್ಲದವರೇ ಬಡವರು. ಹೆಚ್ಚಿನ ಉಳಿತಾಯ ಎಲ್ಲಿಂದ ಆಗುವುದು ಎಂದು ನಿನಗೆ ಮುಂದೆ ಗೊತ್ತಾಗುವುದು. ಒಬ್ಬನು ಇನ್ನೊಬ್ಬನಿಗಿಂತ ಹೆಚ್ಚು ದುಡಿಯುವುದರಿಂದ ಹೀಗೆ ಉಳಿಯುತ್ತದೆಂದು ಹೇಳಲಾಗದು. ಈಗಿನ ಕಾಲದಲ್ಲಿ ಏನೂ ದುಡಿಯದ ಮನುಷ್ಯನಿಗೆ ಹೆಚ್ಚು ಉಳಿತಾಯವಾಗುತ್ತಿದೆ. ಕಷ್ಟಪಡುವವನಿಗೆ ಮಾತ್ರ ಅದರ ಪಾಲು ಸಿಕ್ಕುವುದಿಲ್ಲ. ಇದು ತೀರ ಶಿಳಿಗೇಡಿತನದ ಏರ್ಪಾಟೆಂದು ಗೊತ್ತಾ

ಗುವುದು. ಈ ದಡ್ಡತನದ ವ್ಯವಸ್ಥೆಯಿಂದಲೇ ಜಗತ್ತಿನೊಳಗೆ ಈಗ ಎಷ್ಟೋ ಬಡವರಿರುವರೆಂದು ಜನರು ತಿಳಿಯುತ್ತಾರೆ. ಈಗ ಈ ಮಾತನ್ನು ತಿಳಿದು ಕೊಳ್ಳುವುದು ನಿನಗೆ ಹೆಚ್ಚು ಗಡಚಾಗಿ ತೋರಬಹುದು. ಹಾಗಿದ್ದರೆ ನೀನು ಅದರ ಗೋಜಿಗೆ ಹೋಗಬೇಡ. ಅದನ್ನು ನೀನು ಬೇಗನೆ ತಿಳಿದು ಕೊಳ್ಳಬಲ್ಲವಳಾಗಬಹುದು.

ಒಂದು ಹೊತ್ತಿಗೆ ಬೇಕಾದುದಕ್ಕಿಂತ ಹೆಚ್ಚಾದ ಕಾಳುಕಡಿ ಒಕ್ಕಲು ತನದಿಂದ ಬೆಳೆಯತೊಡಗಿತು. ಇದನ್ನಷ್ಟೆ ನೀನು ಈಗ ನೆನಪಿನಲ್ಲಿಡು. ಹೆಚ್ಚಿನದೆಲ್ಲ ಉಳಿಯಿಡಲಾಯಿತು ಆಗಿನ ಕಾಲದಲ್ಲಿ ಕುಸೀದಗಳಾಗಲಿ ನಾಣ್ಯಗಳಾಗಲಿ ಇರಲಿಲ್ಲ. ಆಕಳು, ಕುರಿ, ಒಂಟೆ ಅಥವಾ ಕಾಳುಕಡಿಗಳು ಹೇರಳವಾಗಿದ್ದವರೇ ಸಿರಿವಂತರೆಂದೆನ್ನಿಸಿಕೊಳ್ಳುತ್ತಿದ್ದರು.

---

೧೫

# ನಾಯಕ ಅಥವಾ ಗೌಡನು ಹೇಗೆ ಮೊದಲಾದನು?

ಈ ಪತ್ರಗಳು ತುಸು ತೊಡಕಿನವಾಗುತ್ತಿರುವವೆಂದು ನನಗೆನಿಸು ತ್ತಿದೆ! ಆದರೆ ನಾವು ನಾಲ್ಕೂ ಕಡೆಗೆ ನೋಡುತ್ತಿರುವ ಬಾಳುವೆಯೆ ತೊಡ ಕಿನದಾಗಿದೆ. ಹಿಂದಿನ ಕಾಲದಲ್ಲಿ ಅದು ಬಲು ಹಗುರಾಗಿತ್ತು. ಆದರೆ ನಾವು ಈಗ ತೊಡಕುಗಳು ಮೊದಲಾದ ಕಾಲವನ್ನು ಕುರಿತು ಚರ್ಚಿಸುತ್ತಿರು ವೆವು. ಸಾವಕಾಶವಾಗಿ ಶೋಧಿಸುತ್ತ ನಡೆದರೆ, ಮತ್ತು ಜನಜೀವನ ಮಾರ್ಪಡುತ್ತ ಬಂದುದನ್ನು ತಿಳಿದುಕೊಳ್ಳಲು ಯತ್ನಿಸಿದರೆ, ಇಂದಿನ ಎಷ್ಟೋ ಸಂಗತಿಗಳನ್ನು ತಿಳಿದುಕೊಳ್ಳಲು ನಮಗೆ ಸುಲಭವಾಗುವುದು. ಹಾಗೆ ಮಾಡದಿದ್ದರೆ ಮಾತ್ರ ಸುತ್ತುಮುತ್ತು ನಡೆದಿರುವುದೆಲ್ಲವನ್ನೂ ನಾವು ತಿಳಿದುಕೊಳ್ಳಲಾರೆವು. ಮಹಾರಣ್ಯದಲ್ಲಿ ದಿಕ್ಕುಗೆಟ್ಟುಹೋದ ಹುಡುಗ ನಂತೆ ನಮ್ಮ ಅವಸ್ಥೆ ಆಗುವುದು. ಈ ಕಾರಣದಿಂದಲೇ ನಾನು ನಿನ್ನನ್ನು ಅಡವಿಯ ಹಿಂದಿನ ತುದಿಗೆ ಕರೆದೊಯ್ಯಬೇಕೆನ್ನುತ್ತೇನೆ. ಅದರಿಂದ ನಾವು ಅಡವಿಯ ಒಳಗಿನ ದಾರಿಯನ್ನು ಕಂಡುಕೊಳ್ಳಬಹುದು.

ಮಸೂರಿನಲ್ಲಿದ್ದಾಗ ಅರಸರೆಂದರೇನು, ಅವರು ಹೇಗೆ ಹುಟ್ಟಿದರು, ಏನು ಮಾಡುತ್ತಿರುತ್ತಾರೆ ಎಂದು ನೀನು ನನ್ನನ್ನು ಕೇಳಿದ್ದು ನಿನಗೆ ನೆನಪಿರ

ಬಹುದು. ನಾವು ಈಗ ಅರಸರು ಮೊದಲಾದಂದಿನ ಬಹಳ ಹಿಂದಿನ ಕಾಲದಲ್ಲಿ ಒಳಹೊಕ್ಕು ತುಸು ನೋಡಿಕೊಳ್ಳಬೇಕಾಗಿದೆ. ಮೊಟ್ಟಮೊದಲು ಅವರಿಗೆ ಅರಸರೆನ್ನುತ್ತಿರಲಿಲ್ಲ. ಅವರನ್ನು ಕುರಿತು ನಾವು ಏನನ್ನಾದರೂ ತಿಳಿದುಕೊಳ್ಳಲೆತ್ನಿಸಿದರೆ ಅವರ ಬುಡವೇ ನಮಗೆ ಗೊತ್ತಾಗುವುದು.

ತಂಡಗಳು ಅಥವಾ ಬೆಡಗುಗಳು ಹೇಗಾದವೆಂಬುದನ್ನು ನಾನು ನಿನಗೆ ಮೊದಲೇ ಹೇಳಿದ್ದೇನೆ. ಒಕ್ಕಲುತನ ಹುಟ್ಟಿದಾಗ— ಕೆಲಮಟ್ಟಿಗೆ ,ದುಡಿತದ ಹಂಚಿಕೆಯಾದಾಗ— ತಂಡದವನೊಬ್ಬನು ಉಳಿದವರಿಗೆ ಕೆಲಸವನ್ನು ಹಂಚಿಕೊಡಬೇಕಾಯಿತು. ಇದಕ್ಕಿಂತ ಮೊದಲು, ಒಂದು ತಂಡ ಮತ್ತೊಂದು ತಂಡದ ಸಂಗಡ ಕಾದುವಾಗ, ತಂಡಗಳಿಗೆ ಒಬ್ಬ ಮುಂದಾಳು ಬೇಕಾಗುತ್ತಿದ್ದನು. ಸಾಮಾನ್ಯವಾಗಿ ಗುಂಪಿನಲ್ಲಿ ಹಿರಿಯನಾದವನೇ ಇಂತಹ ಮುಂದಾಳಾಗುತ್ತಿದ್ದನು. ಇವನನ್ನು ಮೊಕ-ನಾಯಕ ಅಥವಾ ಗೌಡನೆಂದು ನಾವು ಕರೆಯೋಣ. ಇವನು ಹಿರಿಯನಾದುದರಿಂದ ಎಲ್ಲರಿಗಿಂತ ಅನುಭವವುಳ್ಳವನೂ ಬುದ್ಧಿವಂತನೂ ಎಂದು ತಿಳಿವಳಿಕೆ ಇತ್ತು. ಈ ಮೊಕ-ನಾಯಕನಲ್ಲಿ ಮತ್ತು ಗುಂಪಿನ ಉಳಿದ ಜನರಲ್ಲಿ ವಿಶೇಷವಾಗಿ ಹೆಚ್ಚು ಕಡಿಮೆ ಇದ್ದಿಲ್ಲ. ಇವನು ಎಲ್ಲರ ಜೊತೆಯಲ್ಲಿ ದುಡಿಯುತ್ತಿದ್ದನು. ಗಳಿಸಿದ ಆಹಾರವೆಲ್ಲ ಗುಂಪಿನ ಎಲ್ಲ ಜನರಲ್ಲಿ ಹಂಚಿಕೆಯಾಗುತ್ತಿತ್ತು. ಪ್ರತಿಯೊಂದು ವಸ್ತುವಿನ ಒಡೆತನ ಗುಂಪಿನದೇ ಆಗಿತ್ತು. ಆಗ ಈಗಿನಂತೆ ಯಾರಿಗೂ ತನ್ನ ಸ್ವಂತದ ಮನೆ, ಹಣ ಮತ್ತು ಇತರ ಸಾಮಾನುಗಳಿದ್ದಿಲ್ಲ, ಯಾವನೊಬ್ಬನು ಗಳಿಸಿದ ಯಾವುದೇ ವಸ್ತುವಿರಲಿ, ಅದು ಗುಂಪಿಗೆ ಒಳಪಟ್ಟಿದ್ದೆಂಬ ಭಾವನೆಯಿಂದ ಎಲ್ಲರಲ್ಲಿ ಹಂಚಿಕೆಯಾಗುತ್ತಿತ್ತು. ಈ ಹಂಚುವ ಕೆಲಸವನ್ನು ಮೊಕ-ನಾಯಕನೇ ಮಾಡುತ್ತಿದ್ದನು.

ಆದರೆ ಎಲ್ಲವೂ ಮಾರ್ಪಡುತ್ತ ನಡೆಯಿತು. ವಿಶೇಷವಾಗಿ, ಒಕ್ಕಲುತನದಿಂದ ಹೊಸ ಹೊಸ ಹೋರೆಗಳು ಹುಟ್ಟಿದವು. ಹಿರಿಯ ಗೌಡನು ದಾವತಿಗಳನ್ನು ಹಂಚಿ ಹಾಕುವುದರಲ್ಲಿಯೂ ತಂಡದ ಎಲ್ಲ ಕುಳಗಳಿಂದ ಕೆಲಸ ಸರಿಯಾಗಿ ನಡೆದಿದೆಯೊ ಇಲ್ಲವೊ ಎಂಬುದನ್ನು ನೋಡುವುದಲ್ಲಿಯೂ ತನ್ನ ಎಲ್ಲ ವೇಳೆಯನ್ನು ಕಳೆಯುತಿದ್ದನು. ಬರಬರುತ್ತ ಗೌಡನು ಕುಳಗಳಂತೆ ದುಡಿಯುವುದನ್ನು ಬಿಟ್ಟುಬಿಟ್ಟನು. ಹೀಗೆ ಅವನು ಉಳಿದ ಜನರಿಗಿಂತ ತೀರ ಬೇರೆಯವನಾದನು. ಈಗ ಬೇರೊಂದು ತರದಿಂದ ದುಡಿತದ ಹಂಚಿಕೆ

ಯಾದದ್ದು ನಮಗೆ ಕಂಡುಬರುತ್ತದೆ. ಗೌಡನು ಕೆಲಸಗಳನ್ನು ಹಂಚು ವುದು, ಇತರರಿಂದ ಕೆಲಸ ಮಾಡಿಸುವುದು; ಉಳಿದವರು ಹೊಲಗಳಲ್ಲಿ ದುಡಿಯುವುದು, ಬೇಟೆಯಾಡುವುದು, ಕಾಳಗವನ್ನಾಡುವುದು, ತಪ್ಪು ಹಿರಿ ಯನ ಅಪ್ಪಣೆಯನ್ನು ಪಾಲಿಸುವುದು, ಇದರಂತೆ ನಡೆಯಿತು. ಎರಡು ತಂಡಗಳಲ್ಲಿ ಕಾಳಗದ ಹೊಡಿಕೆಯಾದಾಗ ಗೌಡನಿಗೆ ಮತ್ತಷ್ಟು ಅಧಿಕಾರ ಬರುತ್ತಿತ್ತು. ಯಾಕೆಂದರೆ ಕಾದಾಟದ ಕಾಲದಲ್ಲಿ ನಾಯಕನಿಲ್ಲದ ಕಾಳಗ ಚೆನ್ನಾಗಿ ನಡೆಯುವಂತಿಲ್ಲ. ಈ ರೀತಿ ಗೌಡನ ಆಳಿಕೆ ಬಹಳ ಬಲಿಯಿತು.

ಕೆಲಸ ನೋಡಿಕೊಳ್ಳುವುದು ಹೆಚ್ಚಿದಂತೆ ಅದೆಲ್ಲವನ್ನೂ ಗೌಡನು ಒಬ್ಬನೇ ಮಾಡಲಾರದಂತಾದನು. ತನಗೆ ನೆರವಾಗಬೇಕೆಂದು ಅವನು ಕೆಲವು ಜನರನ್ನು ಆಯ್ದುಕೊಂಡನು. ಆದುದರಿಂದ ಕೆಲಸ ನೋಡಿಕೊಳ್ಳು ವವರು ಹೆಚ್ಚಿದರು. ಆದರೆ ಮೊಕ-ನಾಯಕ ಅಥವಾ ಹಿರೇಗೌಡನು ಮಾತ್ರ ಶ್ರೇಷ್ಠನಾಗಿದ್ದನು. ಆಗ ತಂಡದಲ್ಲಿ, ಕೆಲಸ ಹಂಚಿಹಾಕುವವರು ಮತ್ತು ದುಡಿಯುವವರು, ಹೀಗೆ ಇಬ್ಬಣಗಳಾದುವು. ಅಲ್ಲಿಂದ ಜನರಲ್ಲಿ ಸರಿಸಮಾನತೆ ಉಳಿಯಲಿಲ್ಲ. ಸಾಮಾನ್ಯರಾದ ಈ ಕೆಲಸಗಾರರನ್ನು ಆಳುವ ಅಧಿಕಾರ ಈ ಕೆಲವು ಜನ ಆಡಳಿತಗಾರರಿಗೆ ಸಿಕ್ಕಿತು.

ಈ ನಾಯನು ಮುಂದೆ ಹೇಗೆ ಬೆಳೆದನೆಂಬುದನ್ನು ಮುಂದಿನ ಸಲ ನೋಡೋಣ.

---

## ೧೬

# ನಾಯಕ—ಅವನು ಹೇಗೆ ಬೆಳೆದನು

ನಾನು ಹೇಳುವ ಹಳೆಯ ತಂಡಗಳು ಮತ್ತು ಅವುಗಳ ಹಿರಿಯ ಗೌಡರ ಕತೆಗಳು ನಿನಗೆ ತಲೆಚಿಟ್ಟು ಹಿಡಿಯಲಿಕ್ಕಿಲ್ಲೆಂದು ನಾನು ತಿಳಿಯ ಬಹುದೆ?

ಆಗಿನ ಕಾಲದಲ್ಲಿ ಪ್ರತಿಯೊಂದು ವಸ್ತು ಇಡಿಯ ಬೆಡಗಿನದೇ ಆಗಿತ್ತು. ಅದರ ಮೇಲೆ ಒಬ್ಬೊಬ್ಬರ ಅಧಿಕಾರ ಇರುತ್ತಿರಲಿಲ್ಲವೆಂದು ನಾನು ನಿನಗೆ ಹಿಂದಿನ ಓಲೆಯಲ್ಲಿ ತಿಳಿಸಿರುವೆನು. ಹಿರಿಯ ಗೌಡನಿಗೂ ತನ್ನದೇ ಆದ ಯಾವುದೂ ಇರಲಿಲ್ಲ. ತಂಡದ ಉಳಿದ ಜನರಿಗೆ ಪಾಲು ದೊರೆಯುವಷ್ಟೇ

ಅವನಿಗೂ, ಆ ತಂಡದವನೆಂದು ಪಾಲು ದೊರೆಯುತ್ತಿತ್ತು. ಆದರೆ ಅವನು ಎಲ್ಲರನ್ನೂ ಕೆಲಸಕ್ಕೆ ತೊಡಗಿಸುವವನು; ತಂಡದ ಗಳಿಕೆ, ಸಾಮಾನು, ಎಲ್ಲವನ್ನೂ ನೋಡಿಕೊಳ್ಳುವವನು. ಅವನ ಅಧಿಕಾರಬಲ ಬೆಳೆದಂತೆ ಆ ಗಳಿಕೆಯೆಲ್ಲ ತನ್ನದೇ ಎಂದೂ ತಂಡದ್ದಲ್ಲವೆಂದೂ ತಿಳಿಯತೊಡಗಿದನು. ಆ ತಂಡದ ನಾಯಕನಾದುದರಿಂದ ತಾನೇ ಅದರ ಒಡೆಯನೆಂದೂ ತಿಳಿಯ ತೊಡಗಿದನು! ಒಡೆತನದ ಕಲ್ಪನೆಯ ಹುಟ್ಟು ಹೇಗಾಯಿತೆಂದು ಇದರಿಂದ ನಮಗೆ ತಿಳಿಯುವುದು ಈ ಪದಾರ್ಥ ನನ್ನದು ತನ್ನದೆಂದು ಈಗ ನಾವು ಯಾವಾಗಲೂ ಮಾತನಾಡುತ್ತೇವೆ. ಆದರೆ ನಾನು ನಿನಗೆ ಹೇಳಿದಂತೆ ಮೊಟ್ಟಮೊದಲಿನ ತಂಡಗಳ ಗಂಡಸರು ಹೆಂಗಸರು ಹೀಗೆ ತಿಳಿದುಕೊಳ್ಳು ತ್ತಿರಲಿಲ್ಲ ಆಗ ಪ್ರತಿಯೊಂದು ಒಡವೆ ತಂಡದ್ದೇ ಆಗಿತ್ತು.

ಆದರೆ ಮುಂದೆ ಬರಬರುತ್ತ ಹಿಂದಿನ ಕಾಲದ ನಾಯಕನು ತಂಡ ವೆಂದರೆ ತಾನೇ ಎಂದೂ, ತಂಡದ ಬಹುತರ ಎಲ್ಲ ಒಡವೆಗಳು ತನ್ನವೇ ಎಂದೂ ತಿಳಿದುಕೊಳ್ಳತೊಡಗಿದನು.

ನಾಯಕನು ಸತ್ತ ನಂತರ ತಂಡದವರೆಲ್ಲರೂ ಕೂಡಿ ಇನ್ನೊಬ್ಬನನ್ನು ನಾಯಕನೆಂದು ಆರಿಸುತ್ತಿದ್ದರು. ಆದರೆ ಬೇರೆ ಜನರಿಗಿಂತ ನಾಯಕನ ಮನೆಯವರಿಗೆ ಹಿರಿತನ ಮಾಡುವುದು ಚೆನ್ನಾಗಿ ಗೊತ್ತಿರುತ್ತಿತ್ತು ಯಾವಾ ಗಲೂ ಹಿರಿಯನ ಜೊತೆಗಿದ್ದು ಅವರು ಅವನ ಕೆಲಸದಲ್ಲಿ ನೆರವಾಗುತ್ತಿದ್ದರು. ಹೀಗೆ ಅವರಿಗೆ ಹಿರಿಯತನ ಮಾಡುವುದು ಗೊತ್ತಾಗುತ್ತಿತ್ತು. ಆದುದರಿಂದ ಮುದುಕನಾದ ನಾಯಕನು ಸತ್ತನೆಂದರೆ, ಅವನ ಮನೆಗೆ ಸೇರಿದ ಇನ್ನೊಬ್ಬ ನನ್ನು ತಂಡದವರು ಆಯ್ಕೆ ಮಾಡಬೇಕಾಗುತ್ತಿತ್ತು. ಮುಂದೆ ಹಿರಿಯನ ಮನೆತನ ಉಳಿದ ಜನರಿಂದ ಬೇರೆಯಾಗುತ್ತ ನಡೆದು ಗುಂಪಿನ ಜನರು ಆ ಮನೆತನವನ್ನೇ ನಾಯಕರೆಂದು ತಿಳಿಯುತ್ತ ಬಂದರು. ಈಗ ನಾಯಕನ ಅಧಿಕಾರ ಹೆಚ್ಚಾಯಿತು ತನ್ನ ತರುವಾಯ ತನ್ನ ಮನೆಯವರಿಗೇ ಹಿರಿತನ ದೊರೆಯಬೇಕೆಂದು ಅವನು ತಾನಾಗಿಯೆ ಇಚ್ಛಿಸುತ್ತಿದ್ದನು; ಮತ್ತು ಇದ ಕ್ಕಾಗಿ ಬಲು ಪ್ರಯತ್ನ ಮಾಡುತ್ತಿದ್ದನು. ಆದುದರಿಂದ ಅವನು ತನ್ನ ಮಗನನ್ನು ಇಲ್ಲವೆ ಬೇರೊಬ್ಬ ಸಮೀಪ ಸಂಬಂಧಿಯನ್ನು ತನ್ನ ಕೆಲಸದಲ್ಲಿ ಪಳಗಲು ಕಲಿಸುತ್ತಿದ್ದನು. ತಾನೇ ಆರಿಸಿ ಕೆಲಸ ಕಲಿಸಿ ಯಾರನ್ನು ಗೊತ್ತು ಮಾಡುತ್ತಿದ್ದನೊ ಅವನನ್ನೇ ಮುಂದೆ ನಾಯಕನನ್ನಾಗಿ ಮಾಡಿರೆಂದು

ಗುಂಪಿನ ಜನರಿಗೆ ಹೇಳುತ್ತಿದ್ದನು. ಹೀಗೆ ಹೇಳಿಡುವುದು ಗುಂಪಿನ ಜನರಿಗೆ ಮೊದಮೊದಲು ಸರಿಬಿದ್ದಿರಲಿಕ್ಕಿಲ್ಲ. ಬರಬರುತ್ತ ಇದು ಅವರಿಗೆ ರೂಢಿಯಾಗಿ ನಾಯಕನು ಹೇಳಿದ್ದನ್ನೇ ಯಾವಾಗಲೂ ಮಾಡತೊಡಗಿದರು. ಎಲ್ಲರು ಒಟ್ಟುಗೂಡಿ ಹೊಸ ನಾಯಕನನ್ನು ಗೊತ್ತುಮಾಡುವುದು ತಪ್ಪಿಹೋಯಿತು ತನ್ನ ಸ್ಥಳಕ್ಕೆ ಯಾರು ಬರಬೇಕೆಂದು ಮುದಿಮನುಷ್ಯನು ಮೊದಲೇ ಗೊತ್ತುಮಾಡುತ್ತಿದ್ದನು. ಅವನೇ ಅಧಿಕಾರಿ.

ಹೀಗೆ ಹಿರಿಯತನ ವಂಶ-ಪರಂಪರೆಯಿಂದ ಬಂದುದು ನಮಗೆ ಗೊತ್ತಾಗುತ್ತದೆ ಅಂದರೆ ಅದು ಒಂದೇ ಮನೆತನದಲ್ಲುಳಿಯಿತು. ತಂದೆಯಿಂದ ಮಗನಿಗೆ ಇಲ್ಲವೆ ಇನ್ನೊಬ್ಬ ಸಂಬಂಧಿಗೆ ಅದು ಸೇರುತ್ತಿತ್ತು. ಗುಂಪಿನ ಎಲ್ಲ ಒಡವೆಗಳು ತನ್ನವೆ ಆಗಿರುವವೆಂದು ಹಿರಿಯ ಗೌಡನಿಗೆ ಈಗ ಮಂದಟ್ಟಾಯಿತು. ಅವನು ಸತ್ತಮೇಲೆಯೂ ಎಲ್ಲ ಒಡವೆಗಳು ಅವನ ಮನೆತನದಲ್ಲಿಯೆ ಉಳಿಯುತ್ತ ನಡೆದವು. ಯಾವುದಾದರೊಂದು ಒಡವೆ ನನ್ನದು ತನ್ನದೆಂಬ ಕಲ್ಪನೆ ಹೇಗೆ ಮೊದಲಾಯಿತೆಂಬುದು ಈಗ ನಮಗೆ ಗೊತ್ತಾಯಿತು. ಮೊದಲು ಈ ತರದ ತಿಳಿವಳಿಕೆ ಇರಲಿಲ್ಲ. ಗುಂಪಿನ ಎಲ್ಲ ಜನರು ಒಟ್ಟುಗೂಡಿ ಬೆಡಗಿಗಾಗಿ ದುಡಿಯುತ್ತಿದ್ದರು; ತಮ್ಮ ಸ್ವಂತಕ್ಕಾಗಿ ಅಲ್ಲ. ಅವರು ಏನನ್ನಾದರೂ ಹೇರಳವಾಗಿ ಗಳಿಸಿದರೆ ಗುಂಪಿನ ಪ್ರತಿಯೊಬ್ಬನು ತನ್ನ ಪಾಲನ್ನು ಪಡೆಯುತಿದ್ದನು ತಂಡದಲ್ಲಿ ಬಡವರು ಬಲ್ಲಿದರು ಎಂಬ ಭೇದವಿರಲಿಲ್ಲ. ಗಳಿಕೆಯಲ್ಲಿ ಎಲ್ಲರೂ ಪಾಲುಗಾರರಾಗಿದ್ದರು.

ಹಿರಿಯ ನಾಯಕನು ತಂಡದ ಒಡವೆಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುತ್ತ, ಅವು ತನ್ನವೆಂದು ತಿಳಿಯತೊಡಗಿದ ಕೂಡಲೇ ಜನರು ಸಿರಿವಂತರೂ ಬಡವರೂ ಆಗತೊಡಗಿದ್ದು ನಮಗೆ ಗೊತ್ತಾಗುತ್ತದೆ.

ಇದನ್ನು ಕುರಿತು ಮುಂದಿನ ಪತ್ರದಲ್ಲಿ ನಿನಗೆ ಇನ್ನೂ ಬಹಳ ಹೇಳತಕ್ಕದ್ದಿದೆ.

---

## ೧೭

# ಹಿರಿಯ ನಾಯಕನು ಅರಸನಾದನು

ಈ ಮುದಿ ಹಿರಿಯ ನಾಯಕನು ನಮ್ಮ ಬಹಳ ಕಾಲವನ್ನು ಕಳೆದನು. ಇವನ ಕತೆಯನ್ನು ನಾವು ಬೇಗನೆ ಮುಗಿಸೋಣ. ಇಲ್ಲದಿದ್ದರೆ ಇವನೇ ಹೆಸರನ್ನು ಮಾರ್ಪಡಿಸಿಕೊಂಡು ಬರುವನು. ಅರಸರು ಹೇಗಾದರು, ಮತ್ತು ಅವರೇನಿದ್ದರೆಂಬುದನ್ನು ನಾನು ನಿನಗೆ ಹೇಳುವೆನೆಂದು ಮಾತು ಕೊಟ್ಟಿದ್ದೆ. ಅರಸರ ಬೇರನ್ನು ತಿಳಿದುಕೊಳ್ಳಬೇಕೆಂದಿದ್ದರೆ, ನಾವು ನೆಟ್ಟಗೆ ಹಿಂದೆ ಹಿರೇ ನಾಯಕರೆಡೆಗೆ ಹೋಗಬೇಕಾಗುತ್ತದೆ. ಇವರೇ ಮುಂದೆ ಅರಸರು, ರಾಜರು ಮತ್ತು ಮಹಾರಾಜರಾದರೆಂದು ನೀನು ತಿಳಿದುಕೊಂಡಿರಬಹುದು.

ಈ ಹಿರಿಯ ನಾಯಕನ ಅಧಿಕಾರ ವಂಶಪರಂಪರೆಯದಾಗತೊಡಗಿತು. ಎಂದರೆ ಮಗನು ತಂದೆಯ ಸ್ಥಳಕ್ಕೆ ಬರತೊಡಗಿದನು. ಆಗ ಅರಸು ಮತ್ತು ಈ ಹಿರಿಯ ಗೌಡನಲ್ಲಿ ಭೇದವಿಲ್ಲದಂತಾಯಿತು. ಇವನೇ ಬೆಳೆಯುತ್ತ ಅರಸನಾದನು. ನಾಡಿನೊಳಗಿನದೆಲ್ಲ ತನ್ನದೇ ಎಂಬುವ ವಿಲಕ್ಷಣ ಕಲ್ಪನೆ ಅರಸನ ತಲೆಯಲ್ಲಿ ಮೂಡಿತು. ತಾನೇ ನಾಡು ಎಂದು ಇವನು ತಿಳಿದುಕೊಂಡನು. ಹೆಸರಾದ ಒಬ್ಬ ಫ್ರೆಂಚ್ ಅರಸು ಹೀಗೆ ಎಂದಿದ್ದಾನೆ. 'ರಾಜ್ಯವೆಂದರೆ ನಾನೇ ಅಥವಾ ನಾನೇ ರಾಜ್ಯ.' ನಾಡೊಳಗಿನ ಕೆಲಸ, ಆಹಾರ ಮತ್ತು ಇನ್ನುಳಿದ ಒಡವೆಗಳನ್ನು ಜನರಲ್ಲಿ ಹಂಚುವುದಕ್ಕಾಗಿ ಜನರಿಂದ ತಾವು ಆಯ್ಕೆಯಾದವರೆಂಬುದನ್ನು ಅರಸರು ಮರತೇ ಬಿಟ್ಟರು. ತಂಡದೊಳಗಿನ ಎಲ್ಲ ಜನರಿಗಿಂತ ತಾವು ಮಿಗಿಲಾದ ಬುದ್ಧಿವಂತರೂ ಅನುಭವವುಳ್ಳವರೂ ಆಗಿದ್ದುದರಿಂದ ತಮ್ಮನ್ನು ಆರಿಸಲಾಗಿದೆಯೆಂಬುದನ್ನು ಇವರು ತಿಳಿಯಲಾರದಂತಾದರು. ತಾವು ಎಲ್ಲರ ಒಡೆಯರು, ನಾಡಿನ ಜನರು ತಮ್ಮ ಆಳುಗಳು ಎಂದು ಇವರು ತಿಳಿದುಕೊಂಡರು. ನಿಜವಾಗಿ ನೋಡಿದರೆ ಈ ಅರಸರೇ ನಾಡಿನ ಆಳುಗಳಾಗಿದ್ದರು!

ತಮ್ಮನ್ನು ಆಯ್ಕೆ ಮಾಡುವುದು ಜನರಿಗೆ ಸಂಬಂಧಪಟ್ಟಿದ್ದಲ್ಲವೆಂದು ಅರಸರು ಹೆಮ್ಮೆಯಿಂದ ತಿಳಿದುಕೊಂಡರು. ಈ ಮಾತು ಮುಂದೆ ಇತಿಹಾಸವನ್ನು ಓದಿದರೆ ಗೊತ್ತಾಗುವುದು. ಅರಸನನ್ನು ದೇವರೇ ಮಾಡಿದನೆಂದು ಇವರು ತಿಳಿಯತೊಡಗಿದರು. ಇವರು ಇದಕ್ಕೆ "ಅರಸರ ಅಧಿಕಾರ ದೇವ

ರಿಂದ ಬಂದುದು" ಎಂದು ನುಡಿದರು. ಹೀಗೆ ಇವರು ಬಹಳ ಕಾಲದವರೆಗೆ ದಾರಿ ತಪ್ಪಿ ನಡೆದರು. ಜನರು ಹೊಟ್ಟೆ-ಸುಡುತ್ತಿರುವಾಗ ಇವರು ವಿಷಯ ಲೋಲುಪರಾಗಿ ಕಾಲಕಳೆಯುತ್ತಿದ್ದರು. ಆದರೆ ಕಟ್ಟಕಡೆಗೆ ಸಾಮಾನ್ಯ ಜನರು ಇದನ್ನು ತಡೆಯಲಾರದಂತಾಗಿ ಕೆಲವು ದೇಶಗಳಲ್ಲಿ ತಮ್ಮ ಅರಸರನ್ನು ತಳ್ಳಿಬಿಟ್ಟರು. ಇಂಗ್ಲೆಂಡಿನ ಜನರು ತಮ್ಮ ಅರಸನಾದ ಮೊದಲನೆ ಚಾರ್ಲ್ಸನ ವಿರುದ್ಧ ಬಂಡನ್ನೆಬ್ಬಿಸಿ ಅವನನ್ನು ಸೋಲಿಸಿ ತಲೆಯನ್ನು ಕೂಡ ಹೇಗೆ ಹೊಡೆಸಿದರು, ಮತ್ತು ಫ್ರಾನ್ಸಿನ ಜನರು ದೊಡ್ಡ ಕ್ರಾಂತಿಗೈಯ್ದು ಇನ್ನು ಮುಂದೆ ಅರಸರೇ ಬೇಡವೆಂದು ಹೇಗೆ ಪಣತೊಟ್ಟರು, ಎಂಬುದನ್ನು ನೀನು ಆಮೇಲೆ ಓದಿಕೊಳ್ಳಬಹುದು. ಪ್ಯಾರಿಸ್ ಪಟ್ಟಣದಲ್ಲಿ ನಾವು 'ಕಾನ್ಸಿರ್ಜೆರಿ' ಎಂಬ ಸೆರೆಮನೆಯನ್ನು ನೋಡಲು ಹೋದುದು ನಿನಗೆ ನೆನಪಿರಬಹುದು. ಆಗ ನೀನು ನಮ್ಮೊಂದಿಗೆ ಇದ್ದೆಯಲ್ಲವೆ? ಈ ಸೆರೆಮನೆಯಲ್ಲಿ ಅರಸುಮನೆತನದವರನ್ನು, ಅರಸನ ಹೆಂಡತಿಯಾದ ಆಂತ್ವೈನೇಯನ್ನು, ಮತ್ತು ಇನ್ನಿತರರನ್ನು ಸೆರೆಯಲ್ಲಿಟ್ಟಿದ್ದರು ಇತ್ತೀಚೆಗೆ, ಕೆಲವು ವರ್ಷಗಳ ಹಿಂದೆ ರಶಿಯ ದೇಶದವರು ಕ್ರಾಂತಿಗೈದು 'ಝೂರ್' ಎಂಬ ತಮ್ಮ ಅರಸನನ್ನು ಹೊಡೆದೋಡಿಸಿದರು. ಇದನ್ನೂ ಮುಂದೆ ನೀನು ಓದಿಕೊಳ್ಳಬಹುದು.

ಹೀಗೆ ಅರಸರದೂ ಒಂದು ಕಾಲವಿತ್ತು. ಆದರೆ ಈಗ ಎಷ್ಟೋ ದೇಶಗಳಲ್ಲಿ ಅರಸರೇ ಇಲ್ಲ. ಫ್ರಾನ್ಸ್, ಜರ್ಮನಿ, ರಶಿಯ, ಸ್ವಿಜ್ಜರ್‌ಲೆಂಡ್, ಅಮೇರಿಕೆ, ಚೀನ ಮತ್ತು ಬೇರೆ ದೇಶಗಳಲ್ಲಿ ಅರಸರೇ ಇಲ್ಲ. ಇವೆಲ್ಲ ಈಗ ಪ್ರಜಾಧಿಪತ್ಯಗಳಾಗಿವೆ. ಇದರ ಅರ್ಥವೇನೆಂದರೆ–ಸಾಮಾನ್ಯ ಜನರು ತಮ್ಮ ಮುಂದಾಳು ಮತ್ತು ಆಡಳಿತಗಾರರನ್ನು ಕಾಲಕಾಲಕ್ಕೆ ಆಯ್ದುಕೊಳ್ಳುವರು. ಈ ಮುಂದಾಳುಗಳು ಮತ್ತು ಆಡಳಿತಗಾರರು ವಂಶಪರಂಪರೆಯವರಾಗಿರುವುದಿಲ್ಲ.

ಇಂಗ್ಲೆಂಡಿನಲ್ಲಿ ಈಗಲೂ ಅರಸನಿರುವುದು ನಿನಗೆ ಗೊತ್ತು. ಆದರೆ ಅವನಿಗೆ ಆಳುವ ಅಧಿಕಾರವಿಲ್ಲ ಅವನು ಏನನ್ನೂ ಮಾಡಲಾರನು. ಎಲ್ಲ ಅಧಿಕಾರ ಪಾರ್ಲಿಮೆಂಟಿನ ಕೈಯಲ್ಲಿರುವುದು. ಪಾರ್ಲಿಮೆಂಟಿನಲ್ಲಿ ಜನರಿಂದ ಆರಿಸಲಾದ ಮುಂದಾಳುಗಳು ಸೇರುವರು. ಲಂಡನ್ ನಗರದಲ್ಲಿ ಪಾರ್ಲಿಮೆಂಟನ್ನು ನೋಡಿದ್ದು ನಿನಗೆ ನೆನಪಿರಬಹುದು.

ಹಿಂದುಸ್ತಾನದಲ್ಲಿ ಅನೇಕ ರಾಜರು ಮಹಾರಾಜರು ಮತ್ತು

ನವಾಬರು ಇನ್ನೂ ಇರುವರು. ಇವರು ಬಹಳ ಸೊಗಸಾದ ಉಡಿಗೆಗಳನ್ನು ಟ್ಟುಕೊಂಡು ಬೆಲೆಯುಳ್ಳ ಮೋಟಾರುಗಳಲ್ಲಿ ತಿರುಗಾಡುತ್ತಾ, ತಮಗಾಗಿ ರೊಕ್ಕದ ಸೂರೆಮಾಡಿಕೊಳ್ಳುತ್ತಿರುವುದನ್ನು ನೀನು ನೋಡುತ್ತಿರುವೆ. ಈ ಹಣವೆಲ್ಲ ಅವರಿಗೆ ಎಲ್ಲಿಂದ ದೊರೆಯುವುದು? ಅವರು ಇದನ್ನು ಜನರಿಂದ ತೆರಿಗೆಯೆಂದು ಪಡೆಯುತ್ತಾರೆ. ತೆರಿಗೆಯ ಹಣವನ್ನು ಕೊಡುವುದು ದೇಶದೊಳಗಿನ ಎಲ್ಲ ಜನರಿಗೆ ಹಿತವಾಗಬೇಕೆಂದು. ಸಾಲೆ, ಔಷಧಾಲಯ, ಪುಸ್ತಕಾಲಯ, ವಸ್ತುಸಂಗ್ರಹಾಲಯಗಳನ್ನು ತೆರೆಯಲು, ಒಳ್ಳೆಯ ದಾರಿಗಳನ್ನು ಹಾಕಿಸಲು ಮತ್ತು ಜನರಿಗೆ ಹಿತವಾಗುವ ಇನ್ನೂ ಅನೇಕ ಕೆಲಸಗಳನ್ನು ಮಾಡಲು ಈ ಹಣದ ಬಳಕೆಯಾಗಬೇಕು. ಆದರೆ ಹಿಂದಿನ ಕಾಲದ ಫ್ರೆಂಚ್ ರಾಜನು 'ರಾಜ್ಯವೆಂದರೆ ನಾನೇ' ಎಂದು ತಿಳಿದುಕೊಂಡಂತೆ ನಮ್ಮ ರಾಜ ಮಹಾರಾಜರು ಇನ್ನೂ ತಿಳಿಯುತ್ತಿರುವರು. ತಮ್ಮ ಸುಖದ ಸಲುವಾಗಿ ಜನರಿಂದ ಬಂದ ಹಣವನ್ನು ವೆಚ್ಚಿಸುತ್ತಿರುವರು. ಅವರು ಲೋಲುಪತೆಯಿಂದ ಕಾಲಕಳೆಯುತ್ತಿರುವಾಗ, ಕಷ್ಟಪಟ್ಟು ದುಡಿದು ಅವರಿಗೆ ಹಣ ಸಲ್ಲಿಸುವ ಜನರು ಮಾತ್ರ ಕೂಳಿಲ್ಲದೆ ಬಳಗೆಡುತ್ತಿರುವರು. ಇಂತಹರ ಮಕ್ಕಳಿಗಾಗಿ ಸಾಲೆಗಳು ಕೂಡ ಇಲ್ಲ!

---

## ೧೮

## ಪ್ರಾಚೀನ ಸಂಸ್ಕೃತಿಗಳು

ನಾಯಕರು ಮತ್ತು ಅರಸರನ್ನು ಕುರಿತು ಹೇಳಿರುವುದು ಸದ್ಯಕ್ಕೆ ಸಾಕು. ಈಗ ನಾವು ತುಸು ಹಿಂದಿರುಗಿ ಪ್ರಾಚೀನ ಸಂಸ್ಕೃತಿಗಳು ಮತ್ತು ಆಗಿನ ಕಾಲದಲ್ಲಿ ಬಾಳಿಹೋದ ಜನರ ಬಗೆಗೆ ವಿಚಾರ ಮಾಡುವಾ.

ಈ ಹಳೆಯ ಜನರ ವಿಷಯದಲ್ಲಿ ನಮಗೆ ಹೆಚ್ಚಿಗೇನೂ ತಿಳಿಯುವುದಿಲ್ಲ. ಆದರೆ ಕಲ್ಲಿನ ಹಳೆ ಮತ್ತು ಹೊಸ ಯುಗದ ಜನರಿಗಿಂತ ಹೆಚ್ಚಿನ ಸಂಗತಿಗಳು ಇವರ ವಿಷಯದಲ್ಲಿ ನಮಗೆ ಗೊತ್ತಾಗುತ್ತವೆ. ಸಾವಿರಾರು ವರುಷಗಳಿಗಿಂತ ಮೊದಲು ಕಟ್ಟಿದ, ಈಗ ಬೀಳ್ಬಿಡೆಯಾದ ದೊಡ್ಡ ದೊಡ್ಡ ಕಟ್ಟಡಗಳು ಇಂದಿಗೂ ನಮಗೆ ದೊರೆಯುತ್ತವೆ. ಈ ಕಟ್ಟಡಗಳನ್ನೂ ಅರಮನೆಗಳನ್ನೂ ದೇಗುಲಗಳನ್ನೂ ನಾವು ನೋಡಿದರೆ, ಹಿಂದಿನ ಕಾಲದ ಜನರು

ಹೇಗಿದ್ದರು, ಮತ್ತು ಏನೇನು ಮಾಡುತ್ತಿದ್ದರೆಂಬ ಕಲ್ಪನೆ ನಮಗಾಗುತ್ತದೆ ಈ ಹಳೆಯ ಕಟ್ಟಡಗಳಲ್ಲಿ ಕೆತ್ತಿದ ಗೊಂಬೆಗಳು ಮತ್ತು ಕೊರೆದ ಚಿತ್ರಗಳು ನಮಗೆ ವಿಶೇಷವಾಗಿ ನೆರವಾಗುತ್ತವೆ. ಈ ಹಳೆಯ ಗೊಂಬೆಗಳಿಂದ ಆಗಿನ ಕಾಲದ ಜನರ ಉಡಿಗೆ ತೊಡಿಗೆಗಳು ಹೇಗಿದ್ದವೆಂಬುದನ್ನೂ ಇನ್ನೂ ಅನೇಕ ಸಂಗತಿಗಳನ್ನೂ ನಾವು ಕಂಡುಕೊಳ್ಳಬಲ್ಲೆವು.

ಮನುಷ್ಯರು ಮೊದಲು ನೆಲೆಗೊಂಡುದು ಮತ್ತು ಸಂಸ್ಕೃತಿಯನ್ನು ಬೆಳಿಸಿಕೊಂಡುದು ಎಲ್ಲಿ ಎಂಬುದನ್ನು ಹೇಳುವುದು ಸಾಧ್ಯವಿಲ್ಲ ಅಟ್ಲಾಂಟಿಕ್ ಮಹಾಸಾಗರದಲ್ಲಿ ಅಟ್ಲಾಂಟಿಸ್ ಎಂಬ ಹೆಸರಿನ ಒಂದು ದೊಡ್ಡ ದೇಶ ವಿತ್ತೆಂದು ಕೆಲವರು ಹೇಳುತ್ತಾರೆ. ಆ ದೇಶದಲ್ಲಿ ಜನರು ಇರುತ್ತಿದ್ದರೆಂದೂ ಅವರು ಒಳ್ಳೇ ಸುಸಂಸ್ಕೃತರಾಗಿದ್ದರೆಂದೂ ನಂಬಿಗೆ ಇದೆ. ಆದರೆ ಹೇಗೋ ಇಡೀ ದೇಶವೇ ಸಮುದ್ರದಲ್ಲಿ ಮುಳುಗಿ ಅದರ ಗುರುತು ಕೂಡ ಇಲ್ಲದಂತಾಗಿದೆ. ಈ ಮಾತನ್ನು ಸಿದ್ಧಗೊಳಿಸುವ ಸಲಕರಣೆಗಳಿಲ್ಲ. ಬರೀ ಕತೆಗಳು ಉಳಿದಿವೆ. ಆದುದರಿಂದ ಇದನ್ನು ನಾವು ವಿಚಾರ ಮಾಡದೆ ಬಿಟ್ಟುಬಿಡೋಣ.

ಇದಲ್ಲದೆ ಪ್ರಾಚೀನ ಕಾಲದಲ್ಲಿ ಅಮೇರಿಕೆಯಲ್ಲಿಯೂ ಮಹತ್ತರವಾದ ನಾಗರಿಕತೆಗಳಿದ್ದುವೆಂದು ಇನ್ನೂ ಕೆಲವರು ಹೇಳುತ್ತಿರುವರು. ಅಮೇರಿಕೆಯನ್ನು ಕೋಲಂಬಸನು ಕಂಡುಹಿಡಿದನೆಂಬ ತಿಳಿವಳಿಕೆ ಇರುವುದು ನಿನಗೆ ಗೊತ್ತಿದೆಯಷ್ಟೆ? ಆದರೆ ಕೋಲಂಬಸನು ಹೋಗುವ ಮೊದಲು ಅಮೇರಿಕಾ ದೇಶ ಇದ್ದಿಲ್ಲವೆಂದು ಇದರರ್ಥವಲ್ಲ. ಕೋಲಂಬಸ್ ಅದನ್ನು ಕಂಡುಹಿಡಿಯುವ ತನಕ ಯುರೋಪಿನ ಜನರಿಗೆ ಅದು ಗೊತ್ತಿರಲಿಲ್ಲ. ಕೋಲಂಬಸನು ಅಲ್ಲಿಗೆ ಹೋಗುವ ಎಷ್ಟೋ ಪೂರ್ವದಲ್ಲಿ ಅಲ್ಲಿ ಜನರಿರುತ್ತಿದ್ದರು; ಮತ್ತು ಅವರದೇ ಆದ ಒಂದು ತರದ ಸಂಸ್ಕೃತಿ ಇತ್ತು. ಉತ್ತರ ಅಮೇರಿಕೆಯ ಮೆಕ್ಸಿಕೋ ದೇಶದ ಯುಕ್‌ತಾನಿನಲ್ಲಿ ಮತ್ತು ದಕ್ಷಿಣ ಅಮೇರಿಕೆಯ ಪೆರು ದೇಶದಲ್ಲಿ ಹಾಳುಬಿದ್ದ ಹಳೆಯ ಕಟ್ಟಡಗಳು ದೊರೆಯುತ್ತವೆ. ಆದುದರಿಂದ ಪೆರು ಮತ್ತು ಯುಕ್‌ತಾನಿನಲ್ಲಿ ಪ್ರಾಚೀನ ಕಾಲದಲ್ಲಿ ನಾಗರಿಕ ಜನರಿರುತ್ತಿದ್ದರೆಂದು ನಾವು ನಿಶ್ಚಯವಾಗಿ ಹೇಳಬಲ್ಲೆವು. ಆದರೆ ಅದರ ವಿಷಯದಲ್ಲಿ ಹೆಚ್ಚಿಗೇನೂ ಗೊತ್ತಾಗಿಲ್ಲ. ಆದುದರಿಂದ ಈಗ ಅವರನ್ನು ಕುರಿತು ಹೆಚ್ಚಿನ ಸಂಗತಿಗಳನ್ನು ನಾನು ಹೇಳಲಾರೆನು. ಅವು ನಮಗೆ ಇನ್ನು ಮುಂದೆ ತಿಳಿಯಬಹುದು.

ಯುರೋಪ್ ಮತ್ತು ಏಸಿಯಕ್ಕೆ ಒಟ್ಟಾಗಿ ಯುರೇಸಿಯಾ ಎಂದು ಕರೆಯುತ್ತಾರೆ. ಯುರೇಸಿಯದೊಳಗಿನ ಮೆಸಪೊಟೆಮಿಯ, ಇಜಿಪ್ಟ್ ಕ್ರೀಟ್, ಹಿಂದುಸ್ತಾನ ಮತ್ತು ಚೀನ ದೇಶಗಳಲ್ಲಿ ಬಹಳವಾಡಿ ಹಳೆಯ ಸಂಸ್ಕೃತಿಗಳಿದ್ದುವು. ಇಜಿಪ್ಟ್ ದೇಶದ ಆಫ್ರಿಕೆಗೆ ಸೇರಿದ್ದೆಂದು ಈಗ ತಿಳಿವಳಿಕೆ ಇದೆ. ಆದರೆ ಅದು ಯುರೇಸಿಯಕ್ಕೆ ತೀರ ಹತ್ತಿರದಲ್ಲಿರುವುದರಿಂದ ಅದನ್ನು ನಾವು ಯುರೇಸಿಯದಲ್ಲಿ ಸೇರಿಸಬಹುದು.

ಕಂಡ ಕಡೆಗೆ ಅಲೆದಾಡುತ್ತಿರುವ ಹಳೆಯ ತಂಡದವರು ಬೀಡು ಬಿಟ್ಟು ನಿಂತುಕೊಳ್ಳಬಯಸಿದಾಗ ಎಂತಹ ಸ್ಥಳಗಳನ್ನು ಹೆಕ್ಕಿಕೊಳ್ಳ ಬೇಕಾಗುತ್ತಿತ್ತು ಬಲ್ಲೆಯಾ ? ಸುಲಭವಾಗಿ ಆಹಾರ ದೊರೆಯುವ ಸ್ಥಳವನ್ನೆ ಅವರು ಆರಿಸುತ್ತಿದ್ದರು. ಒಕ್ಕಲುತನದಿಂದ ಅಂತಹ ಹೊಲಗಳಲ್ಲಿ ತಮಗೆ ಬೇಕಾದುದನ್ನು ಸ್ವಲ್ಪ ಮಟ್ಟಿಗೆ ಬೆಳೆದುಕೊಳ್ಳುತ್ತಿದ್ದರು. ಒಕ್ಕಲುತನಕ್ಕೆ ನೀರು ಅತ್ಯಾವಶ್ಯಕ. ನೀರಿಲ್ಲದಿದ್ದರೆ ಹೊಲಗಳು ಒಣಗಿಬಿಡುತ್ತವೆ. ಅವುಗಳಲ್ಲಿ ಏನೂ ಬೆಳೆಯುವುದಿಲ್ಲ. ಮಳೆಗಾಲದಲ್ಲಿ ಬೇಕಾಗುವಷ್ಟು ಮಳೆ ಬರಲಿಲ್ಲವೆಂದರೆ ಧಾನ್ಯ ಬೆಳೆಯುವುದಿಲ್ಲ. ಅದರಿಂದ ಬರ ಬೀಳುತ್ತದೆ. ತಿನ್ನಲು ಏನೂ ಇಲ್ಲದೆ ಬಡವರು ಉಪವಾಸ ಬೀಳುತ್ತಾರೆ. ಆದುದರಿಂದ ನೀರು ಬೇಕೇ-ಬೇಕು. ಹಿಂದಿನ ಕಾಲದ ವಸತಿಕಾರರು ನೆಲೆಗೊಂಡು ನಿಲ್ಲಲು ಬಹಳ ನೀರಿದ್ದ ಸ್ಥಳವನ್ನೇ ಆರಿಸಿಕೊಂಡರು. ಇದು ನಿಜವೆಂದು ನಮಗೆ ಕಂಡುಬರುತ್ತದೆ.

ಇವರು ಮೆಸಪೊಟೆಮಿಯ ದೇಶದಲ್ಲಿ ಯುಫ್ರೆಟಿಸ್ ಮತ್ತು ಟೈಗ್ರಿಸ್ ಎಂಬ ಮಹಾನದಿಗಳ ನಡುವೆ ಬೀಡುಬಿಟ್ಟರು. ಮಿಸ್ರದೇಶ (ಇಜಿಪ್ತು) ದಲ್ಲಿ ಇವರಿಗೆ ನೀಲ್ ಎಂಬ ದೊಡ್ಡ ಹೊಳೆ ದೊರೆಯಿತು. ಭಾರತ ವರ್ಷದಲ್ಲಿ ಹಳೆಯ ಪಟ್ಟಣಗಳಿದ್ದುದು ಬಹುತರವಾಗಿ ದೊಡ್ಡ ದೊಡ್ಡ ಹೊಳೆಗಳಾದ ಸಿಂಧು, ಗಂಗೆ, ಯಮುನೆಗಳ ಬದಿಯಲ್ಲಿ. ಈ ದೊಡ್ಡ ಹೊಳೆಗಳು ಇವರಿಗೆ ಆಹಾರವನ್ನೂ ವಿಪುಲವಾದ ಸಂಪತ್ತನ್ನೂ ಒದಗಿಸುತ್ತಿದ್ದುವು. ಇವರಿಗೆ ನೀರಿನ ಅವಶ್ಯಕತೆಯೂ ಬಹಳವಿತ್ತು. ಆದುದರಿಂದ ಇವರು ಇವುಗಳನ್ನು ಪವಿತ್ರ ನದಿಗಳೆಂದು ತಿಳಿಯುತ್ತಿದ್ದರು ಮಿಸ್ರ ದೇಶದಲ್ಲಿ ನೀಲ್ ಹೊಳೆಗೆ 'ತಂದೆ' ಎಂದು ಹೆಸರಿಟ್ಟು ಪೂಜಿಸತೊಡಗಿದರು. ಹಿಂದುಸ್ತಾನದಲ್ಲಿ ಗಂಗಾ ನದಿಗೆ ಹಿಂದಿನ ಕಾಲದಲ್ಲಿ ಪೂಜೆ ಸಲ್ಲುತ್ತಿದ್ದು

ದಲ್ಲದೆ ಅದು ಇಂದಿಗೂ ಪವಿತ್ರವಾಗಿದೆ. ಪವಿತ್ರವೆಂದು ಇದಕ್ಕೆ ಗಂಗಾ ಮಾಯಿ ಎಂದರೆ ಗಂಗಮ್ಮ ಎಂದು ಕರೆಯುತ್ತಾರೆ. ಯಾತ್ರಿಕರು ಗಂಗಾ ಮಾಯಿ ಕಿ ಜೈ ಎಂದರೆ ಚಾಂಗುಭಲಾ ಎಂದು ಪರಾಕು ಹಾಕುತ್ತಾರೆ. ಇವು ಇವರಿಗೆ ಬಹಳ ಮಹತ್ವದ ನದಿಗಳಾದುದರಿಂದ ಪೂಜೆಗೆಯ್ಯುತ್ತಾರೆಂದು ತಾನಾಗಿಯೆ ಗೊತ್ತಾಗುತ್ತದೆ. ಈ ನದಿಗಳಿಂದ ಇವರಿಗೆ ನೀರು ಮಾತ್ರ ದೊರೆಯುತ್ತಿದ್ದುದಲ್ಲದೆ ಒಂಡು ಮತ್ತು ಉಸುಕು ಬಿಟ್ಟು ಭೂಮಿ ಇನ್ನೂ ಕಸುವುಳ್ಳದ್ದಾಗುತ್ತಿತ್ತು. ನದಿಯ ನೀರಿನಿಂದ ಮತ್ತು ಒಂಡಿನ ಭೂಮಿಯಿಂದ ಕಾಳುಕಡಿ ಚೆನ್ನಾಗಿ ಬೆಳೆದು ಅನ್ನ ದೊರೆಯುತ್ತಿತ್ತು. ಆದುದರಿಂದ ನದಿಗಳಿಗೆ ತಂದೆ, ತಾಯಿ, ಅಮ್ಮ ಎಂದು ಕರೆಯುವುದರಲ್ಲಿ ತಪ್ಪೇನು? ಆದರೆ ತಾವು ಮಾಡುವ ಕೆಲಸದ ಉದ್ದೇಶವನ್ನು ಮರೆತು ಬಿಡುವುದು ಜನರ ಸ್ವಭಾವ. ತಿಳಿವಳಿಕೆ ಇಲ್ಲದೆ ಹೆರರ ಅನುಕರಣೆ ಮಾಡುತ್ತ ನಡೆಯುತ್ತಾರೆ. ನೀಲ್ ಮತ್ತು ಗಂಗಾ ನದಿಗಳು ಅನ್ನ ನೀರನ್ನು ಕೊಡುತ್ತಿರುವುದೇ ಅವು ಪವಿತ್ರವೆಂದು ತಿಳಿಯಲು ಕಾರಣವೆಂದು ನಾವು ನೆನಪಿನಲ್ಲಿಡಬೇಕು.

---

## ೧೯

# ಹಳೆಯ ಜಗತ್ತಿನೊಳಗಿನ ದೊಡ್ಡ ದೊಡ್ಡ ಪಟ್ಟಣಗಳು

ಜನರು ಮೊದಲು ದೊಡ್ಡ ದೊಡ್ಡ ನದಿಗಳ ಹತ್ತಿರವೂ ಅನ್ನ ನೀರು ಹೇರಳವಾಗಿ ದೊರೆಯುವ ದರಿಗಳಲ್ಲಿಯೂ ಬೀಡು ಬಿಟ್ಟುಕೊಂಡಿದ್ದನ್ನು ನಾವು ನೋಡಿಕೊಂಡೆವು. ಹೊಳೆಗಳ ದಂಡೆಯಲ್ಲಿ ದೊಡ್ಡ ದೊಡ್ಡ ಪಟ್ಟಣಗಳಿದ್ದುವು. ಹೆಸರಾದ ಹಳೆಯ ಕೆಲವು ಪಟಣಗಳ ಹೆಸರನ್ನು ನೀನು ಕೇಳಿರಬಹುದು. ಮೆಸಪೊಟೆಮಿಯದಲ್ಲಿ ಬ್ಯಾಬಿಲೋನ್, ನಿನೇವಾ ಮತ್ತು ಅಸ್ಸುರ್ ಎಂಬ ಪಟ್ಟಣಗಳಿದ್ದುವು. ಆದರೆ ಇವೆಲ್ಲವೂ ಬಹಳ ಕಾಲದ ಹಿಂದೆಯೆ ಇಲ್ಲದಂತಾದುವು. ಉಸುಕು ಅಥವಾ ಭೂಮಿಯನ್ನು ಅಗುಳಿದರೆ ಈ ಪಟ್ಟಣಗಳ ಹಳೆಯ ಗುರುತುಗಳು ಈಗಲೂ ದೊರೆಯುತ್ತವೆ. ಸಾವಿರಾರು ವರುಷಗಳಿಂದ ಅವು ಸಂಪೂರ್ಣವಾಗಿ ಉಸುಕು ಮತ್ತು ಮಣ್ಣಿನಿಂದ ಭೂಮಿಯಲ್ಲಿ ಹೂಳಿಹೋಗಿವೆ. ಇವು ಇಂತಹ ಸ್ಥಳಗಳಲ್ಲಿದ್ದುವೆಂಬುದು

ಕೂಡ ತಿಳಿಯುವುದಿಲ್ಲ. ಕೆಲವು ಕಡೆಗಳಲ್ಲಿ ಹಳೆಯ ಪಟ್ಟಣಗಳು ಹುಗಿದು ಹೋದ ಸ್ಥಳದಲ್ಲಿಯೆ ಹೊಸ ಪಟ್ಟಣಗಳು ತಲೆ ಎತ್ತಿದುವು. ಇವುಗಳನ್ನು ಶೋಧಿಸಬೇಕೆನ್ನುವವರು ಬಹಳ ಆಳವಾಗಿ ಭೂಮಿಯನ್ನು ಅಗೆಯಬೇಕಾಗುತ್ತದೆ. ಕೆಲವು ಸಲ ಒಂದರ ಮೇಲೊಂದು ಪಟ್ಟಣವಿದ್ದುದು ಗೊತ್ತಾಗುತ್ತದೆ ಆದರೆ ಒಂದೇ ವೇಳೆಯಲ್ಲಿ ಅವು ಹೀಗೆ ಬೆಳೆದಿರಲಾರವು. ಒಂದು ಪಟ್ಟಣ ಬಹುಶಃ ನೂರಾರು ವರುಷಗಳ ವರೆಗೆ ಬಾಳಿರಬಹುದು. ಅದರಲ್ಲಿ ಆಗಿನ ಜನರು, ಅವರ ಮಕ್ಕಳು ಮೊಮ್ಮಕ್ಕಳು, ಹುಟ್ಟುತ್ತ ಸಾಯುತ್ತ ಇದ್ದಿರಬಹುದು. ಬರಬರುತ್ತ ಪಟ್ಟಣ ಹಾಳಾಗಿ ಜನರ ಸಂಖ್ಯೆ ಕಡಿಮೆಯಾಗಿರಬಹುದು. ಹೀಗೆ ಕಟ್ಟಕಡೆಗೆ ಜನವಸತಿಯಿಲ್ಲದೆ ಇಡಿಯ ಊರೆ ಹಾಳುಕೊಂಪೆಯಾಗುತ್ತಿತ್ತು. ಉಸುಕು ಮತ್ತು ಧೂಳಿನಿಂದ ಇಡಿಯ ಊರೆ ಮುಚ್ಚಿಹೋಗುತ್ತಿತ್ತು. ಅದನ್ನು ತೆಗೆದುಹಾಕುವವರು ಯಾರೂ ಇರಲಿಲ್ಲ. ಹೀಗೆ ಎಷ್ಟೋ ವರುಷಗಳ ತನಕ ಉಸುಕು ಮತ್ತು ಮಣ್ಣಿನಲ್ಲಿ ಊರು ಹೂಳಿ ಹೋಗಿ ಅಲ್ಲಿ ಪಟ್ಟಣವಿತ್ತೆಂಬುದನ್ನೂ ಜನರು ಮರೆತುಬಿಡುತ್ತಿದ್ದರು. ನೂರಾರು ವರುಷಗಳು ಕಳೆದ ಮೇಲೆ ಹೊಸ ಜನರು ಅಲ್ಲಿಗೆ ಬಂದು ತಿರುಗಿ ನೆಲೆನಿಂತು ಊರನ್ನು ಕಟ್ಟಿಕೊಳ್ಳುತ್ತಿದ್ದರು. ಈ ಹೊಸ ಪಟ್ಟಣ ತನ್ನ ಸರತಿ ಬಂದಾಗ ಹಾಳಾಗಿ ಬೀಳುಕೊಂಪೆಯಾಗುತ್ತಿತ್ತು. ಕಾಲಕಳೆದಂತೆ ಅದಾದರೂ ಮಣ್ಣು ಮತ್ತು ಉಸುಕಿನಲ್ಲಿ ಮುಚ್ಚಿಹೋಗಿ ಇಲ್ಲದಂತಾಗುತ್ತಿತ್ತು. ಹಾಳು ಪಟ್ಟಣಗಳು ಒಂದರಮೇಲೊಂದು ಬೆಳೆಯುವುದು ಹೀಗೆ. ಹೀಗಾಗುವುದು ಬಹುತರ ಉಸುಕಿನ ಪ್ರದೇಶದಲ್ಲಿ. ಯಾಕೆಂದರೆ ಉಸುಕು ಬಹು ಬೇಗನೆ ಎಲ್ಲವನ್ನು ಮುಚ್ಚಿಕೊಳ್ಳುತ್ತದೆ

ಒಂದು ಊರಿನ ಮೇಲೆ ಮತ್ತೊಂದು ಊರು ಬೆಳೆಯುವುದು; ಗಂಡಸರ, ಹೆಂಗಸರ ಮತ್ತು ಮಕ್ಕಳ ಗುಂಪಿಗೆ ಇಂಬುಗೊಡುವುದು. ಆಮೇಲೆ ಮೆಲ್ಲಮೆಲ್ಲನೆ ಹಾಳಾಗುವುದು: ಇದೆಲ್ಲ ವಿಲಕ್ಷಣ ಸಂಗತಿಯಲ್ಲವೆ? ಹಳೆಯ ಊರುಗಳಿದ್ದೆಡೆಯಲ್ಲಿ ಹೊಸ ಊರುಗಳು ಹುಟ್ಟುವವು; ಹೊಸ ಜನರು ಬಂದು ನೆಲೆಸುವರು; ಆಮೇಲೆ ಅವೂ ಹಾಳಾಗಿ ಅವುಗಳ ಗುರುತೂ ಇಲ್ಲದಂತಾಗುವುದು. ಇಂತಹ ಊರುಗಳ ಸಂಬಂಧದಲ್ಲಿ ನಾನು ಕೆಲವೇ ಮಾತುಗಳನ್ನು ಬರೆಯುತ್ತಿರುವೆನು. ಆದರೆ ಈ ಊರುಗಳು ಹುಟ್ಟಿ ಬೆಳೆದು ಇಲ್ಲದಂತಾಗಿ ಮತ್ತೆ ಅವುಗಳ ಸ್ಥಳದಲ್ಲಿ ಬೇರೆ ಊರುಗಳಾಗುವುದಕ್ಕೆ

ಎಷ್ಟು ಸಾವಿರ ವರುಷಗಳು ಬೇಕಾಗುವುದೆಂಬುದನ್ನು ಯೋಚಿಸಿ ನೋಡು. ಎಪ್ಪತ್ತು ಇಲ್ಲವೆ ಎಂಬತ್ತು ವರುಷಗಳ ಒಬ್ಬ ಮುದುಕ ಮನುಷ್ಯನನ್ನು ನಾವು ಮುದುಕನೆನ್ನುತ್ತೇವೆ. ಈ ಸಾವಿರಾರು ವರುಷಗಳನ್ನು ಯೋಚಿಸುವಾಗ ಎಪ್ಪತ್ತು ಎಂಬತ್ತು ವರುಷಗಳು ಈಡೇ ? ಈ ಊರುಗಳಲ್ಲಿ ಎಷ್ಟೋ ಸಣ್ಣ ಸಣ್ಣ ಹುಡುಗರು ಮೇಲಿಂದ ಮೇಲೆ ಬೆಳೆದು ದೊಡ್ಡವರಾಗಿ ಸತ್ತು ಹೋಗಿರಬಹುದು ! ಆದರೆ ಈಗ ನಮಗೆ ಉಳಿದಿರುವುದು ಬ್ಯಾಬಿಲೋನ್ ಮತ್ತು ನಿನೇವಾ ಪಟ್ಟಣಗಳ ಹೆಸರುಗಳು ಮಾತ್ರ.

ಮತ್ತೊಂದು ಹಳೆಯ ಪಟ್ಟಣ, ದಮಸ್ಕಸ್ ಎಂಬುದು. ಸಿರಿಯದಲ್ಲಿತ್ತು. ಆದರೆ ದಮಸ್ಕಸ್ ಹಾಳಾಗಿ ಹೋಗಲಿಲ್ಲ. ಅದು ಹಾಗೆಯೇ ಉಳಿದು ಇನ್ನೂ ದೊಡ್ಡ ಪಟ್ಟಣವಾಗಿದೆ. ಈಗ ಜಗತ್ತಿನಲ್ಲಿ ದಮಸ್ಕಸ್ ಪಟ್ಟಣ ಎಲ್ಲಕ್ಕಿಂತ ಹಳೆಯದೆಂದು ಕೆಲವರು ಹೇಳುತ್ತಾರೆ.

ಹಿಂದುಸ್ತಾನದಲ್ಲಿ ನಮ್ಮ ಹಳೆಯ ಪಟ್ಟಣಗಳಿರುವುದೂ ನದಿಗಳ ದಂಡೆಯ ಮೇಲೆಯೇ. ಇಂದ್ರಪ್ರಸ್ಥ ಬಹಳ ಹಳೆಯ ಪಟ್ಟಣಗಳಲ್ಲೊಂದಾಗಿತ್ತು. ಅದು ಇದ್ದುದು ದಿಲ್ಲಿಯ ಹತ್ತಿರ ಎಲ್ಲಿಯೊ ಒಂದು ಕಡೆ. ಆದರೆ ಇಂದ್ರಪ್ರಸ್ಥ ಈಗ ಉಳಿದಿಲ್ಲ. ವಾರಣಾಸಿ ಅಥವಾ ಕಾಶೀ ಪಟ್ಟಣವಾದರೂ ಬಹಳ ಹಳೆಯದು. ಬಹುಶಃ ಜಗತ್ತಿನಲ್ಲಿ ಉಳಿದಿರುವ ತೀರ ಹಳೆಯ ಪಟ್ಟಣಗಳಲ್ಲಿ ಇದೂ ಒಂದು. ಅಲಹಾಬಾದು, ಕಾನಪುರ, ಪಾಟ್ನಾ, ಮತ್ತು ನಿನಗೆ ಗೊತ್ತಿರಬಹುದಾದ ಇನ್ನೂ ಕೆಲವು ಪಟ್ಟಣಗಳಿರುವುದೂ ಹೊಳೆಗಳ ದಂಡೆಗಳ ಮೇಲೆ. ಆದರೆ ಅವು ಅಷ್ಟು ಹಳೆಯವಲ್ಲ. ಪ್ರಯಾಗ ಅಥವಾ ಅಲಹಾಬಾದು ಮತ್ತು ಪಾಟ್ನಾ ಅಥವಾ ಪಾಟಲೀಪುತ್ರ ಪಟ್ಟಣಗಳು ಸ್ವಲ್ಪ ಹಳೆಯವಾಗಿರುವವು.

ಇದರಂತೆ ಚೀನದಲ್ಲಿಯೂ ಪುರಾತನ ಪಟ್ಟಣಗಳಿವೆ.

---

## ೨೦

# ಮಿಶ್ರದೇಶ ಮತ್ತು ಕ್ರೀಟ್

ಅತಿ ಹಿಂದಿನ ಕಾಲದ ಈ ಪಟ್ಟಣಗಳಲ್ಲಿ ಯಾವ ತರದ ಜನರಿದ್ದರು? ಅವರು ಕಟ್ಟಿದ ಕಟ್ಟಡ ಮತ್ತು ಮಂದಿರಗಳಿಂದ ಅವರನ್ನು ಕುರಿತು ನಾವು

ಅಲ್ಪಸ್ವಲ್ಪವನ್ನು ತಿಳಿಯಬಹುದು. ಇದಲ್ಲದೆ ಅವರು ಬರೆದಿರುವ ಕಲ್ಲಿನ ಬರಹಗಳಿಂದಲೂ ಹಲಕೆಲವು ಸಂಗತಿಗಳು ಗೊತ್ತಾಗುತ್ತವೆ. ಆಗಿನ ಕಾಲದ ಹೆಚ್ಚು ಸಂಗತಿಗಳನ್ನು ಹೇಳುವ ತೀರ ಹಳೆಯ ಕೆಲವು ಹೊತ್ತಗೆಗಳೂ ನಮಗೆ ದೊರೆಯುತ್ತವೆ.

ಮಿಸ್ರದೇಶದ ಲಕ್ಸರ್ ಮತ್ತು ಇತರ ಕಡೆಗಳಲ್ಲಿ ಪಿರೆಮಿಡ್ಡುಗಳು–ಒಂದು ತರದ ಗುಮ್ಮಟಗಳು–, ಸ್ಫಿಂಕ್ಸ್‌ಗಳು, ಸಿಂಹನಾರಿಗಳು, ಮತ್ತು ದೊಡ್ಡ ದೊಡ್ಡ ದೇಗುಲಗಳ ಹಾಳುಗಳು ನಮಗೆ ಕಾಣುತ್ತವೆ. ನಾವು ಸುಯೇಜು ಕಾಲುವೆಯೊಳಗಿಂದ ಹೋಗುವಾಗ ಅವು ನಮಗೆ ತೀರ ಹತ್ತಿರದಲ್ಲಿದ್ದರೂ ನೀನು ಅವುಗಳನ್ನು ನೋಡಲಿಲ್ಲ. ಆದರೆ ಅವುಗಳ ಚಿತ್ರಗಳನ್ನು ನೀನು ನೋಡಿರುವೆ ಈ ಚಿತ್ರಗಳ ಅಂಚೆಕಾರ್ಡುಗಳು ನಿನ್ನಲ್ಲಿರಬಹುದು. ಸ್ಫಿಂಕ್ಸ್ ಎಂದರೆ ಹೆಂಗಸಿನ ಮೋರೆಯ ಸಿಂಹ. ಅದು ಬಹಳ ದೊಡ್ಡದಾಗಿದೆ. ಅದನ್ನು ಮಾಡಿದುದು ಯಾಕೆ, ಮತ್ತು ಅದು ಏನು ಸೂಚಿಸುತ್ತದೆಂಬುದು ಯಾರಿಗೂ ತಿಳಿದಿಲ್ಲ. ಹೆಂಗಸಿನ ಮೋರೆಯ ಮೇಲೆ ನಗುವಿನ ಕಳೆ ಇರುವುದು ಇದು ಜನರಿಗೆ ಆಶ್ಚರ್ಯವನ್ನುಂಟುಮಾಡುತ್ತಿದೆ. 'ಅವನು ಸ್ಫಿಂಕ್ಸನಂತಿರುವನು' ಎಂದರೆ ಅವನ ವಿಷಯದಲ್ಲಿ ಏನೂ ತಿಳಿಯದೆಂದರ್ಥ.

ಪಿರೆಮಿಡ್ಡುಗಳೂ ಬಲು ದೊಡ್ಡ ಕಟ್ಟಡಗಳು. ಇವು ವಸ್ತುತಃ ಮಿಸ್ರದೇಶದೊಳಗಿನ ಹಿಂದಿನ ಅರಸರ ಗುಮ್ಮಟಗಳು. ಈ ಅರಸರ ಹೆಸರು ಫರೊ ಎಂದು ಲಂಡನ್ ಪಟ್ಟಣದ ವಸ್ತು ಸಂಗ್ರಹಾಲಯದಲ್ಲಿ ಮಿಸ್ರದೇಶದ 'ಮಮ್ಮಿ'ಗಳನ್ನು ನೋಡಿದ್ದುದು ನಿನಗೆ ನೆನಪಿರುವುದೆ? ಪಶುವಿನ ಇಲ್ಲವೆ ಮನುಷ್ಯನ ಹೆಣ ಕೊಳೆಯಬಾರದೆಂದು ಅದಕ್ಕೆ ಎಣ್ಣೆ, ಮಸಾಲೆಯನ್ನು ಹಚ್ಚಿಡುತ್ತಿದ್ದರು. ಇದೇ ಮಮ್ಮಿ. ಫರೋ ಅರಸರು ಸತ್ತ ಮೇಲೆ ಅವರ ಶರೀರಗಳನ್ನು 'ಮಮ್ಮಿ'ಮಾಡಿ ಈ ದೊಡ್ಡ ಗುಮ್ಮಟಗಳಲ್ಲಿಡುತ್ತಿದ್ದರು. ಈ ಮಮ್ಮಿಗಳ ಹತ್ತಿರ ಬೆಳ್ಳಿ ಮತ್ತು ಬಂಗಾರದ ಒಡವೆಗಳು, ಅರಸರು ಕುಳ್ಳಿರುವ ಸಾಮಾನುಗಳು, ಆಹಾರ ಮುಂತಾದವುಗಳನ್ನು ಇಡುತ್ತಿದ್ದರು. ಅವರು ಸತ್ತಮೇಲೆ ಅವು ಅವರಿಗೆ ಬೇಕಾಗಬಹುದೆಂದು ಜನರ ತಿಳಿವಳಿಕೆ. ಎರಡು ಮೂರು ವರುಷಗಳ ಹಿಂದೆ ಕೆಲವು ಜನರು ಇಂತಹ ಒಂದು ಗುಮ್ಮಟದಿಂದ ಒಬ್ಬ ಫರೋವಿನ ದೇಹವನ್ನು ಹುಡುಕಿ ತೆಗೆದರು. ಈ ಅರಸನ ಹೆಸರು ತುತಾಂಖಮೆನ್ ಎಂದು. ಇವನ ಹೆಣದ ಬಳಿಯಲ್ಲಿ ಚೆಲುವಾದ,

ಬೆಲೆಯುಳ್ಳ ಎಷ್ಟೋ ಒಡವೆಗಳಿದ್ದುವು.

ಆಗಿನ ಕಾಲದಲ್ಲಿ ಮಿಸ್ರ ದೇಶದಲ್ಲಿ ಕೂಡ ಸಾಗುವಳಿಗೂ ನೀರಾವರಿಗೂ ಕೆರೆ ಕಾಲುವೆಗಳನ್ನೂ ಕಟ್ಟಿಸಿದ್ದರು. ಅಲ್ಲಿ ಮೆರುಡು ಎಂಬುದೊಂದು ಹೆಸರಾದ ಕೆರೆಯಿತ್ತು. ಇದರಿಂದ, ಪೂರ್ವಕಾಲದ ಮಿಸ್ರ ದೇಶದ ಜನರು ಎಷ್ಟು ಬುದ್ಧಿವಂತರು ಮತ್ತು ಚತುರರಾಗಿದ್ದರೆಂದು ಗೊತ್ತಾಗುತ್ತದೆ. ಇಂತಹ ಕೆರೆ, ಕಾಲುವೆ, ಗುಮ್ಮಟಗಳನ್ನು ಕಟ್ಟಬೇಕಾದರೆ ಒಳ್ಳೇ ಶಿಲ್ಪ ಶಾಸ್ತ್ರ ಬಲ್ಲವರು ಅವರಲ್ಲಿದ್ದಿರಬಹುದು.

ಕ್ರೀಟ್ ಅಥವಾ ಕೆಂಡಿಯಾ ಎಂಬುವ ಸಣ್ಣ ನಡುಗಡ್ಡೆ ಭೂಮಧ್ಯ ಸಮುದ್ರದಲ್ಲಿದೆ. ಪೋರ್ಟ್-ಸಯ್ಯದಿನಿಂದ ವಿನಿಸಿಗೆ ನಾವು ಹೋದುದು ಅದರ ಹತ್ತಿರದಿಂದಲೇ. ಪ್ರಾಚೀನ ಕಾಲದಲ್ಲಿ ಈ ನಡುಗಡ್ಡೆಯಲ್ಲಿ ಉತ್ತಮವಾದ ಒಂದು ಸಂಸ್ಕೃತಿ ಇತ್ತು. ಕ್ರೀಟ್ ದೇಶದ ನೋಸಸ್ಸಿನಲ್ಲಿ ಬಲು ದೊಡ್ಡದೊಂದು ಅರಮನೆ ಇದೆ. ಈ ಅರಮನೆಯ ಬೀಳು ಕುರುಹುಗಳು ಇನ್ನೂ ಉಳಿದಿವೆ. ಅರಮನೆಯೊಳಗೆ ನೀರ್ಮನೆ ಮತ್ತು ನೀರಿನ ಕೊಳವೆಗಳಿವೆ. ತಿಳುವಳಿಕೆ ಇಲ್ಲದ ಜನರು, ಇವು ಈಗಿನ ಕಾಲದ ಕೃತಿಗಳೆಂದು ನಂಬುತ್ತಾರೆ. ಸುಂದರವಾದ ಗಡಿಗೆ, ಮಡಿಕೆ, ಕಲ್ಲಿನಲ್ಲಿ ಕೊರೆದ ಗೊಂಬೆ, ಚಿತ್ರಗಳು, ಧಾತು ಮತ್ತು ಆನೆಕೋರೆಯ ಕುಸುರಿನ ಕೆಲಸಗಳು ಅಲ್ಲಿ ಇವೆ. ಈ ಕ್ರೀಟ್ ನಡುಗಡ್ಡೆಯಲ್ಲಿ ಜನರು ಸುಖವಾಗಿದ್ದು ಬಹಳ ಮುಂದುವರಿದಿದ್ದರು.

ನೀನು ಮಿಡಾಸ್ ಎಂಬ ಅರಸನ ಕತೆಯನ್ನು ಓದಿರಬಹುದು. ಅವನು ಮುಟ್ಟಿದ್ದೆಲ್ಲ ಚಿನ್ನವಾಗುತ್ತಿತ್ತು. ಅದರಿಂದ ಅವನು ಬಹಳ ತೊಂದರೆಗೊಳಗಾದನು. ಮುಟ್ಟಿದ್ದೆಲ್ಲ ಮಿಸುನಿಯಾಗುತ್ತಿದ್ದುದರಿಂದ ಅವನು ಉಣ್ಣಲಾರದವನಾದನು. ಬಂಗಾರವನ್ನು ಉಣ್ಣಲಾದೀತೆ? ಅವನ ಆಸೆಬುರುಕತನಕ್ಕೆ ತಕ್ಕ ಶಿಕ್ಷೆಯಾಯಿತು. ಆದರೆ ಇದೊಂದು ಕಟ್ಟುಕತೆ. ಈ ಕತೆ ಇರುವುದು, ಬಂಗಾರ ಜನರು ತಿಳಿದಿರುವಷ್ಟು ಉಪಯೋಗದ್ದೂ ಅಲ್ಲ, ಒಳ್ಳೆಯದೂ ಅಲ್ಲವೆಂದು ತೋರಿಸಲಿಕ್ಕೆ ಮಾತ್ರ.

ಕ್ರೀಟ್ ದೇಶದ ಕತೆ ಇನ್ನೊಂದಿದೆ. ಅದನ್ನು ನೀನು ಕೇಳಿರಬಹುದು. ಅದು ಮಿನೋಟಾರ್ ಎಂಬ ರಾಕ್ಷಸನ ಕತೆ. ಈ ಮಿನೋಟಾರ್ ರಾಕ್ಷಸನೆಂದರೆ ಅರ್ಧ ಮನುಷ್ಯ ಅರ್ಧ ಎತ್ತು ಕೂಡಿದ ಒಂದು ಪ್ರಾಣಿ. ಇದಕ್ಕೆ

ನರವೃಷಭವೆನ್ನಬಹುದು ನಮ್ಮಲ್ಲಿ ನರಸಿಂಹನಿಲ್ಲವೆ? ಹಾಗೆ. ಹರೆಯದ ಗಂಡಸು ಹೆಂಗಸನ್ನು ಅದಕ್ಕೆ ತಿನ್ನಲು ಕೊಡುತ್ತಿದ್ದರಂತೆ! ತಿಳಿಯದ ವಸ್ತುವಿನ ಹೆದರಿಕೆಯಿಂದ ಧರ್ಮದ ಕಲ್ಪನೆ ಹುಟ್ಟಿತೆಂದು ನಿನಗೆ ಮೊದಲೇ ಹೇಳಿದ್ದೇನೆ. ಅಂಜಿಕೆಯಿಂದಲೆ ನಮ್ಮ ಸುತ್ತುಮುತ್ತು ನಡೆದಿರುವ ಸಂಗತಿಗಳನ್ನು ಮತ್ತು ಪ್ರಕೃತಿಯನ್ನು ಜನರು ಅರಿಯದೆ ತಿಳಿಗೇಡಿತನದ ಎಷ್ಟೋ ಕೆಲಸಗಳನ್ನು ಮಾಡುತ್ತಿರುವರು. ಇದರಂತೆ, ಹುಡುಗ ಹುಡುಗಿಯರನ್ನು ಆ ಕಾಲ್ಪನಿಕ ರಾಕ್ಷಸನಿಗೆ ಬಲಿ ಕೊಡುತ್ತಿದ್ದಿರಬಹುದು. ಇಂತಹ ರಾಕ್ಷಸನು ಎಂದಾದರೂ ಇದ್ದಿರಬೇಕೆಂದು ನಾನಂತೂ ನಂಬುವುದಿಲ್ಲ

ಆ ಹಿಂದಿನ ಕಾಲದಲ್ಲಿ ಜಗತ್ತಿನಲ್ಲೆಲ್ಲ ನರಬಲಿ ಕೊಡುವ ರೂಢಿ ಇತ್ತು. ಎಂದರೆ ಜನರು ತಾವು ಪೂಜಿಸುತ್ತಿದ್ದ ಕಾಲ್ಪನಿಕ ದೇವತೆಗಳಿಗೆ ಗಂಡಸು-ಹೆಂಗರಸನ್ನು ಬಲಿಗೊಡುತ್ತಿದ್ದರು. ಮಿಸ್ರ ದೇಶದಲ್ಲಿ ಹುಡುಗಿಯರನ್ನು ನೀಲ್ ನದಿಯಲ್ಲಿ ಎಸೆಯುತ್ತಿದ್ದರು, ನೀಲಪ್ಪನಿಗೆ ಸಂತೋಷವಾಗುವುದುದೆಂದು!

ಈಗ ಜಗತ್ತಿನಲ್ಲಿ ಯಾವುದೊ ಒಂದು ಮೂಲೆಯಲ್ಲಿ, ಬಹಳ ದೂರ, ನರಬಲಿ ಕೊಡುತ್ತಿರುವರು. ಸುದೈವದಿಂದ ಇದು ಇನ್ನೆಲ್ಲಿಯೂ ನಡೆದಿಲ್ಲ. ಆದರೆ ಈಗಿನ ಕಾಲದಲ್ಲಿಯೂ ಕೆಲವರು ದೇವರ ಸಂತೋಷಕ್ಕಾಗಿ ಪಶುಗಳನ್ನು ಕಡಿದು ಬಲಿ ಕೊಡುತ್ತಾರೆ ಪೂಜೆಯ ಇದೊಂದ ವಿಲಕ್ಷಣಪದ್ಧತಿ.

---

## ೨೧

# ಚೀನ ಮತ್ತು ಹಿಂದುಸ್ಥಾನ

ಮೆಸಪೊಟೆಮಿಯ, ಮಿಸ್ರದೇಶ, ಮತ್ತು ಭೂಮಧ್ಯ ಸಮುದ್ರದಲ್ಲಿಯ ಚಿಕ್ಕ ನಡುಗಡ್ಡೆಯಾದ ಕ್ರೀಟನಲ್ಲಿ ಪ್ರಾಚೀನ ಸಂಸ್ಕೃತಿಗಳು ಹುಟ್ಟಿ ಬೆಳೆದುವೆಂಬುದನ್ನು ನಾವು ತಿಳಿದುಕೊಂಡೆವು. ಚೀನ ಮತ್ತು ಭರತಖಂಡದಲ್ಲಿಯಾದರೂ ಅದೇ ಕಾಲದಲ್ಲಿ ಸ್ವತಂತ್ರವಾಗಿ ಹಿರಿಯ ಸಂಸ್ಕೃತಿಗಳು ತಲೆದೋರಿ ಬೆಳೆದುವು.

ಬೇರೆ ಕಡೆಗೆ ಜನರು ದೊಡ್ಡ ನದಿಗಳ ನಡುವಿನ ಕೊಳ್ಳಗಳಲ್ಲಿ ಬೀಡು

ಬಿಟ್ಟಿರುವಂತೆ ಚೀನದಲ್ಲಿಯೂ ನೆಲಸಿದರು. ಮಂಗೋಲಿಯನ್ನರೆಂದು ಹೆಸರಿರುವುದು ಈ ಜನರಿಗೇ. ಇವರು ಕಂಚಿನ ಸುಂದರವಾದ ಪಾತ್ರೆಗಳನ್ನು ಮಾಡುತ್ತಿದ್ದರು. ಅನಂತರ ಕಬ್ಬಿಣದ ಪಾತ್ರೆಗಳನ್ನು ಮಾಡ ತೊಡಗಿದರು. ಕಾಲುವೆಗಳೂ, ಸುಂದರವಾದ ಕಟ್ಟಡಗಳೂ ಕಟ್ಟಲಾದುವು. ಬರೆಯುವ ಹೊಸ ಪದ್ಧತಿಯೆಂದು ತಲೆದೋರಿತು. ನಾವು ಬರೆಯುವ ಹಿಂದಿ, ಇಂಗ್ಲಿಷು, ಉರ್ದು ಲಿಪಿಗಿಂತ ಅದು ತೀರ ಬೇರೆಯಾದುದು. ಅದೊಂದು ತರದ ಚಿತ್ರ ಲಿಪಿ. ಪ್ರತಿಯೊಂದು ಶಬ್ದ, ಒಮ್ಮೊಮ್ಮೆ ಪ್ರತಿಯೊಂದು ಸಣ್ಣ ವಾಕ್ಯ ಒಂದು ಚಿತ್ರವೇ ಆಗಿರುತ್ತಿತ್ತು. ಪ್ರಾಚೀನ ಮಿಸ್ರದೇಶ, ಕ್ರೀಟು ಮತ್ತು ಬೆಬಿಲೋನಿನಲ್ಲಿಯೂ ಚಿತ್ರಲಿಪಿ ಬಳಕೆಯಲ್ಲಿತ್ತು. ಇದಕ್ಕೆ ಈಗ ಹಿರಿಗ್ಲಿಫಿಕ್ ಲಿಪಿ ಎಂದು ಹೆಸರು. ಪ್ರಾಚೀನ ವಸ್ತು-ಸಂಗ್ರಹಾಲಯಗಳಲ್ಲಿಯೂ ಕೆಲವು ಸ್ತಕಗಳಲ್ಲಿಯೂ ಈ ಲಿಪಿಯನ್ನು ನೀನು ನೋಡಿರಬಹುದು. ಮಿಶ್ರದೇಶ ಮತ್ತು ಪಶ್ಚಿಮ ದೇಶಗಳಲ್ಲಿ ಈ ಲಿಪಿ ಹಳೆಯ ಕಟ್ಟಡಗಳಲ್ಲಿ ಮಾತ್ರ ಕಾಣಸಿಗುತ್ತದೆ. ಅಲ್ಲಿ ಈ ಲಿಪಿಯನ್ನು ಬಹಳ ಕಾಲದವರೆಗೆ ಯಾರೂ ಬಳಸಲಿಲ್ಲ. ಆದರೆ ಚೀನದೊಳಗಿನ ಬರಹ ಈಗಲೂ ಒಂದು ಬಗೆಯ ಚಿತ್ರಲಿಪಿಯಾಗಿದೆ. ಅದನ್ನು ಬರೆಯುವುದು ಮೇಲಿಂದ ಕೆಳಗೆ ನೀವು ಅಂಕಿ ಮಗ್ಗಿಗಳನ್ನು ಬರೆವ ಹಾಗೆ. ಕನ್ನಡ ಮತ್ತು ಇಂಗ್ಲಿಷಿನಂತೆ ಎಡದಿಂದ ಬಲಕ್ಕೆ ಇಲ್ಲವೆ ಉರ್ದುವಿನಂತೆ ಬಲದಿಂದ ಎಡಕ್ಕೆ ಬರೆಯುವುದಲ್ಲ.

ಹಿಂದುಸ್ತಾನದಲ್ಲಿ ಹಾಳಾಗಿ ಉಳಿದ ಹಳೆಯ ಎಷ್ಟೋ ಕಟ್ಟಡಗಳು ನೆಲದಲ್ಲಿ ಅಥವಾ ಉಸುಕಿನಲ್ಲಿ ಇಂದಿಗೂ ಹೂಳಿರಬಹುದು. ಅವುಗಳನ್ನು ಅಗೆದು ಹೊರಗೆಡಹುವ ವರೆಗೆ ಅವು ನಮ್ಮ ಕಣ್ಣಿಗೆ ಬೀಳುವುದಿಲ್ಲ. ಆದರೆ ಇತ್ತೀಚೆಗೆ ಇಂತಹ ಕೆಲವು ಹಳೆಯ ಬೀಳುಗಳನ್ನು ಉತ್ತರ ದೇಶದಲ್ಲಿ ಹುಡುಕಿ ತೆಗೆದಿದ್ದಾರೆ. ಬಹು ಪ್ರಾಚೀನ ಕಾಲದಲ್ಲಿ, ಆರ್ಯರು ಹಿಂದುಸ್ತಾನಕ್ಕೆ ಬರುವ ಮೊದಲೆ ಇಲ್ಲಿರುತ್ತಿದ್ದುದು ದ್ರಾವಿಡ ಜನರು. ಅವರ ಸಂಸ್ಕೃತಿ ಬಲು ಚೆನ್ನಾದುದು. ಬೇರೆ ಬೇರೆ ದೇಶಗಳೊಡನೆ ಅವರು ವ್ಯಾಪಾರ ಮಾಡುತ್ತಿದ್ದರು. ಮೆಸಪೊಟೆಮಿಯ ಮತ್ತು ಮಿಸ್ರದೇಶಕ್ಕೆ ಸಾಮಾನುಗಳನ್ನು ಕಳಿಸುತ್ತಿದ್ದರು. ಸಮುದ್ರದ ಆಚೆಗೆ ಅಕ್ಕಿ, ಮೆಣಸು ಮುಂತಾದ ಮಸಾಲೆಯ ಸಾಮಾನುಗಳನ್ನು ಮತ್ತು ಮನೆಕಟ್ಟಲು ಬೇಕಾ

ಗುವ ತೇಗಿನ ತೊಲೆಗಳನ್ನು ಹೇರಳವಾಗಿ ಕಳಿಸುತ್ತಿದ್ದರು. ಮೆಸಪೊಟೆಮಿಯದಲ್ಲಿಯ ಉರ್ ಎಂಬ ಪಟ್ಟಣದ ಕೆಲವು ಪುರಾತನ ಅರಮನೆಗಳು ದಕ್ಷಿಣ ಹಿಂದುಸ್ತಾನದಿಂದ ಕಳಿಸಿದ ತೇಗಿನಿಂದ ಕಟ್ಟಲಾದುವುಗಳೆಂದು ಜನರು ಹೇಳುತ್ತಾರೆ. ಇದಲ್ಲದೆ ದೊಡ್ಡ ಜಾತಿಯ ಮಂಗ, ನವಿಲು, ಆನೆಯ ಕೋರೆ, ಮುತ್ತು ಮತ್ತು ಬಂಗಾರವನ್ನು ಹಿಂದುಸ್ತಾನದಿಂದ ಪಾಶ್ಚಾತ್ಯ ದೇಶಗಳಿಗೆ ಕಳಿಸುತ್ತಿದ್ದರಂತೆ. ಆ ಕಾಲದಲ್ಲಿ ಭರತಖಂಡ ಮತ್ತು ಉಳಿದ ದೇಶಗಳ ನಡುವೆ, ಚೆನ್ನಾದ ವ್ಯಾಪ್ಯಾರ ನಡೆಯುತ್ತಿದ್ದಿರಬೇಕು. ಜನರು ಸುಸಂಸ್ಕೃತರಿದ್ದರೆ ಮಾತ್ರ ವ್ಯಾಪಾರ ನಡೆಯುವುದು.

ಹಿಂದುಸ್ತಾನ ಮತ್ತು ಚೀನ, ಎರಡು ದೇಶಗಳಲ್ಲಿಯೂ ಆಗ ಸಣ್ಣಪುಟ್ಟ ರಾಜ್ಯ ಮತ್ತು ಪಾಳಯಗಳಿದ್ದುವು. ಎರಡೂ ನಾಡುಗಳಲ್ಲಿ, ದೇಶವೆಲ್ಲವೂ ಒಂದೇ ಆಡಳಿತಕ್ಕೆ ಎಂದೂ ಒಳಪಟ್ಟಿರಲಿಲ್ಲ. ಕೆಲವು ಹಳ್ಳಿಗಳನ್ನು ಮತ್ತು ಭೂಮಿಗಳನ್ನು ಒಳಗೊಂಡ ಪ್ರತಿಯೊಂದು ಪಟ್ಟಣ ಒಂದು ರಾಜ್ಯವಾಗುತ್ತಿತ್ತು. ಈ ರಾಜ್ಯಗಳಿಗೆ 'ನಗರ ರಾಜ್ಯ'ಗಳೆಂದು ಹೆಸರು. ಆಗಿನ ತೀರ ಹಿಂದಿನ ಕಾಲದಲ್ಲಿಯೂ ಇವುಗಳೊಳಗಿನ ಎಷ್ಟೋ ರಾಜ್ಯಗಳಲ್ಲಿ 'ಪ್ರಜಾಪ್ರಭುತ್ವ' ಬಳಕೆಯಲ್ಲಿತ್ತು. ಅರಸರು ಇರಲಿಲ್ಲ. ಇವುಗಳನ್ನು ಜನರು ಆರಿಸಿದ ಒಂದು ತರದ ಪಂಚಾಯತು ಆಳುತ್ತಿತ್ತು. ಆದರೆ ಇವುಗಳಲ್ಲಿ ಕೆಲವು ಚಿಕ್ಕ ಸಂಸ್ಥಾನಗಳಿದ್ದುವು. 'ನಗರ ರಾಜ'ಗಳು ಬೇರೆಬೇರೆಯಾಗಿ ಸ್ವತಂತ್ರವಾಗಿದ್ದರೂ ಕೆಲವೊಮ್ಮೆ ಅವು ತಮ್ಮ ತಮ್ಮಲ್ಲಿ ಸಹಕರಿಸುತ್ತಿದ್ದುವು. ಎಂದರೆ ಅವು ಒಂದಕ್ಕೊಂದು ನೆರವಾಗುತ್ತಿದ್ದುವು. ಒಮ್ಮೊಮ್ಮೆ ಚಿಕ್ಕಚಿಕ್ಕ ಸಂಸ್ಥಾನಗಳಿಗೆ ದೊಡ್ಡ ಸಂಸ್ಥಾನವೊಂದು ಮುಂದಾಳಾಗುತ್ತಿತ್ತು.

ಚೀನದಲ್ಲಿ ಈ ಸಣ್ಣಪುಟ್ಟ ಸಂಸ್ಥಾನಗಳು ಒಂದು ದೊಡ್ಡ ಸಾಮ್ರಾಜ್ಯಕ್ಕೆ ಇಂಬುಗೊಟ್ಟವು. ಹಿರಿದಾದ ಗೋಡೆಯನ್ನು ಕಟ್ಟಿದುದು ಈ ಸಾಮ್ರಾಜ್ಯ ಯುಗದಲ್ಲಿಯೆ. ಈ ಗೋಡೆಯ ವಿಷಯದಲ್ಲಿ ನೀನು ಓದಿರುವೆ. ಎಂತಹ ಅದ್ಭುತ ಗೋಡೆಯದು! ಉಳಿದ ಮಂಗೋಲಿಯ ಜನಾಂಗಗಳು ಚೀನದಲ್ಲಿ ಒಳನುಗ್ಗಿ ಬರಬಾರದೆಂದು ಸಮುದ್ರದಿಂದ ಉತ್ತರದ ಪರ್ವತಗಳ ವರೆಗೆ ಅದನ್ನು ಕಟ್ಟಲಾಗಿದೆ. ಈ ಗೋಡೆ ೧೪೦೦ ಮೈಲು ಉದ್ದ, ೨೦ ರಿಂದ ೩೦ ಅಡಿ ಎತ್ತರ, ಮತ್ತು ೨೫ ಅಡಿ ಅಗಲವಾಗಿರುವದು. ನಡುನಡುವೆ ಕೋಟೆಗಳೂ ಹೊಡೆಗಳೂ ಇವೆ.

ಹಿಂದೂಸ್ತಾನದಲ್ಲಿ ಇಂತಹ ಗೋಡೆಯನ್ನು ಕಟ್ಟಿದ್ದರೆ ಅದು ಉತ್ತರದಲ್ಲಿ ಲಾಹೋರಿನಿಂದ, ದಕ್ಷಿಣದಲ್ಲಿ ಮದ್ರಾಸಿನವರೆಗೆ ಬೆಳೆಯುತ್ತಿತ್ತು. ಈ ದೊಡ್ಡ ಗೋಡೆ ಇಂದಿನ ತನಕ ಉಳಿದಿದೆ. ನೀನು ಚೀನಕ್ಕೆ ಹೋದರೆ ಇದನ್ನು ನೋಡಬಲ್ಲೆ.

---

೨೨

## ಕಡಲ ಪಯಣ ಮತ್ತು ವ್ಯಾಪಾರ

ಕುತೂಹಲವನ್ನು ಹುಟ್ಟಿಸುವ ಇನ್ನೊಂದು ಪ್ರಾಚೀನ ಜನಾಂಗ ಫಿನಿಶಿಯನ್ನರದು. ಫಿನಿಶಿಯನ್ನರು ಯಹೂದಿ ಮತ್ತು ಅರಬರ ಪಂಗಡಕ್ಕೆ ಸೇರಿದವರು. ಇವರು ಹೆಚ್ಚಾಗಿ ಏಸಿಯಾ ಮೈನರಿನ ಪಶ್ಚಿಮದಂಡೆ—ಎಂದರೆ ಈಗಿನ ತುರ್ಕಸ್ಥಾನದಲ್ಲಿ ಇರುತ್ತಿದ್ದರು. ಭೂಮಧ್ಯ ಸಮುದ್ರದ ದಂಡೆಯ ಮೇಲೆ ಏಕರ್ (Acre), ಟೈರ್ ಮತ್ತು ಸಿಡಾನ್ ಎಂಬುವು ಇವರ ಮುಖ್ಯ ಪಟ್ಟಣಗಳು. ಇವರು ವ್ಯಾಪಾರಕ್ಕಾಗಿ ಕಡಲಿನಲ್ಲಿ ಬಹಳ ದೂರದವರೆಗೆ ಪ್ರವಾಸ ಮಾಡುವವರೆಂದು ಹೆಸರಾಗಿದ್ದರು. ಭೂಮಧ್ಯ ಸಮುದ್ರದಲ್ಲೆಲ್ಲ ಕಡೆಗೂ, ಕಡಲ ಹಾದಿಯಿಂದ ಇಂಗ್ಲೆಂಡಿನವರೆಗೂ ಇವರು ಹೋಗುತ್ತಿದ್ದರು. ಇವರು ಹಿಂದುಸ್ತಾನಕ್ಕೂ ಬಂದಿರಬಹುದು.

ಈ ಕಾಲದಲ್ಲಿ ನಮಗೆ ಚಿತ್ತಾಕರ್ಷಕವಾದ ಎರಡು ಸಂಗತಿಗಳು ಕಾಣಸಿಗುತ್ತವೆ. ಅವು ಯಾವುವೆಂದರೆ: ಸಮುದ್ರ ಪ್ರವಾಸ ಮತ್ತು ವ್ಯಾಪಾರ. ಇವುಗಳಿಗೆ ಒಂದರಿಂದ ಇನ್ನೊಂದಕ್ಕೆ ನೆರವು ಸಿಕ್ಕಿತು. ಆದರೆ ಈಗ ನಮ್ಮ ಕಣ್ಣಿಗೆ ಬೀಳುವ ಹಡಗು ಮತ್ತು ನೌಕೆಗಳು ಆಗ ಇರಲೇ ಇಲ್ಲ. ಮೊದಲಿನ ನಾವೆಗಳು ಬರಿಯ ಪೊಳ್ಳುಗೈದ ಮರದ ಬೊಡ್ಡೆಗಳಿದ್ದಿರಬೇಕು. ಇವುಗಳನ್ನು ಹುಟ್ಟುಹಾಕಿ ನಡೆಯಾಡಿಸುತ್ತಿದ್ದರು. ಒಮ್ಮೊಮ್ಮೆ ಗಾಳಿಯನ್ನು ತಡೆದು ಹಿಡಿಯುವುದಕ್ಕಾಗಿ ಹಾಯಿಯನ್ನು ಕಟ್ಟುತ್ತಿದ್ದರು. ಆಗಿನ ಕಾಲದ ಜಲಪರ್ಯಟನ ಹುರುಪುಗೊಳಿಸುವುದಾಗಿದ್ದಿರಬೇಕು. ಸಣ್ಣ ಸಣ್ಣ ನವೆಗಳು ಹುಟ್ಟಾಡಿಸುತ್ತ ಹಾಯಿಗಳೊಂದಿಗೆ ಪಶ್ಚಿಮ ಸಮುದ್ರವನ್ನು ದಾಟುತ್ತಿರುವುದನ್ನು ಮನಸ್ಸಿನಲ್ಲಿ ಯೋಚಿಸು. ಈ ನಾವೆಯಲ್ಲಿ ಅತ್ತಿತ್ತ ಸರಿದಾಡಲು ಎಡೆ ಇರುತ್ತಿರಲಿಲ್ಲ. ತೀರ ಸ್ವಲ್ಪ ಗಾಳಿಯಿಂದಲೇ

ಇದು ಗಿರಗಿರನೆ ತಿರಿಗಿ ಬುಡಮೇಲಾಗಿ ಒಮ್ಮೊಮ್ಮೆ ಮುಳುಗಿಯೂ ಹೋಗು ತಿತ್ತು. ಶೂರರು ಮಾತ್ರ ಇಂತಹ ನವಿಯ ಮೂಲಕ ಹರವಾದ ಕಡಲಿನಲ್ಲಿ ಹೋಗುವ ಸಾಹಸ ಮಾಡುತ್ತಿದ್ದರು. ಹೀಗೆ ಹೋಗುವಾಗ ಅನೇಕ ಸಂಕಟಗಳು ಒದಗುತ್ತಿದ್ದವು. ಒಮ್ಮೊಮ್ಮೆ ತಿಂಗಳುಗಟ್ಟಲೆ ಭೂಮಿಯ ಮೋರೆ ಸಹ ಕಾಣುತ್ತಿದ್ದಿಲ್ಲ. ನಡುಗಡಲಲ್ಲಿ ಕೂಳು ಮುಗಿದುಹೋದರೆ ಮೀನುಗಳನ್ನಾಗಲಿ ಹಕ್ಕಿಗಳನ್ನಾಗಲಿ ಹಿಡಿದ ಹೊರತು ಅವರಿಗೆ ಅನ್ನವೇ ದೊರೆಯುತ್ತಿರಲಿಲ್ಲ. ಆಗಿನ ಕಾಲದ ಕಡಲ ಪಯಣವೆಂದರೆ ಅದೊಂದು ಅತ್ಯಂತ ಸಾಹಸದ ಕಥೆ. ಆಗಿನ ಅಂಬಿಗರ ಮತ್ತು ಸಮುದ್ರದಲ್ಲಿ ನಡೆದ ವಿಲಕ್ಷಣವಾದ ಸಂಗತಿಗಳ ಎನಿತೋ ಕತೆಗಳನ್ನು ನಾವು ಈಗಲೂ ಕೇಳಬಹುದು

ಆದರೆ ಕುತ್ತುಗಳಿಗೆ ಎದುರಾಗಿಯೂ ಜನರು ಕಡಲ ಪಯಣನ್ನು ಮಾತ್ರ ಬಿಡಲಿಲ್ಲ. ಕೆಲವರು ಸಾಹಸ-ಪ್ರಿಯರಾಗಿದ್ದುದರಿಂದ ಇದನ್ನು ಕೈಕೊಳ್ಳುತ್ತಿದ್ದರು. ಬಹು ಜನರಿಗೆ ಹಣ ಮತ್ತು ಬಂಗಾರದ ಆಸೆ. ಅವರು ಹೋಗುತ್ತಿದ್ದುದು ವ್ಯಾಪಾರಕ್ಕಾಗಿ—ಸರಕನ್ನು ಕೊಂಡು ಮಾರುವುದಕ್ಕಾಗಿ. ಹೀಗೆ ಅವರು ದುಡ್ಡು ಗಳಿಸುತಿದ್ದರು

ವ್ಯಾಪಾರವೆಂದರೇನು, ಅದು ಹೇಗೆ ಮೊದಲಾಯಿತು, ಬಲ್ಲೆಯಾ? ಈಗಿನ ಕಾಲದಲ್ಲಿ ದೊಡ್ಡದೊಡ್ಡ ಅಂಗಡಿಗಳು ನಿನ್ನ ಕಣ್ಣಿಗೆ ಕಾಣುತ್ತವೆ. ಇಂತಹ ಅಂಗಡಿಗಳಿಗೆ ಹೋಗಿ ಬೇಕಾದುದನ್ನು ಕೊಂಡುಕೊಳ್ಳುವುದು ಬಹಳ ಸುಲಭ. ಆದರೆ ನೀನು ಕೊಳ್ಳುವ ಪದಾರ್ಥಗಳು ಎಲ್ಲಿಂದ ಬರುತ್ತ ವೆಂಬುದನ್ನು ಬಲ್ಲೆಯಾ? ಅಲಹಾಬಾದಿನ ಒಂದು ಅಂಗಡಿಯಲ್ಲಿ ನೀನು ಶಾಲು ಕೊಳ್ಳುತ್ತಿ. ಅದು ಕಾಶ್ಮೀರದಿಂದ ಬರುವುದು. ಆ ಶಾಲಿನ ಉಣ್ಣೆ ಕಾಶ್ಮೀರದ ಇಲ್ಲವೆ ಲಡಖ್ ಪ್ರಾಂತದ ಗುಡ್ಡಗಳಲ್ಲಿರುವ ಕುರಿಗಳ ಮೈಮೇಲೆ ಬೆಳೆಯುತ್ತದೆ. ನೀನು ಕೊಂಡುಕೊಳ್ಳುವ ಹಲ್ಲುಪುಡಿ ಬಂದದ್ದು ಹಡಗು ಮತ್ತು ಉಗಿಬಂಡಿಯ ಮೂಲಕ ಅಮೇರಿಕೆಯಂತಹ ದೂರ ದೇಶದಿಂದ. ಇದರಂತೆಯೆ ಜಪಾನು, ಚೀನ, ಅಥವಾ ಲಂಡನ್ನಿನಲ್ಲಿ ಹುಟ್ಟುವಳಿ ಯಾದ ಸರಕನ್ನು ನೀನು ಕೊಂಡುಕೊಳ್ಳುವೆ. ನಮ್ಮ ಪೇಟೆಯಲ್ಲಿ ಮಾರಾಟವಾಗುವ ಪರದೇಶದ ಬಟ್ಟೆಯ ಒಂದು ತುಂಡನ್ನು ಕುರಿತು ಯೋಚಿಸಿ ನೋಡು. ಹತ್ತಿ ಬೆಳೆಯುವುದು ಹಿಂದುಸ್ತಾನದಲ್ಲಿ. ಇಲ್ಲಿಂದ

ಅದು ಇಂಗ್ಲಂಡಿಗೆ ಹೋಗುತ್ತದೆ ಬಟ್ಟೆಯ ಒಂದು ದೊಡ್ಡ ಕಾರಖಾನೆ ಅದನ್ನು ಕೊಂಡು ಅದರಲ್ಲಿಯ ಕಸಕಡ್ಡಿಯನ್ನು ತೆಗೆದು, ಹಿಂಜಿ, ದಾರ ಮಾಡಿ, ನೇಯ್ದು ಬಟ್ಟೆಯನ್ನು ಮಾಡುತ್ತದೆ. ಈ ಬಟ್ಟೆ ತಿರುಗಿ ಹಿಂದು ಸ್ತಾನಕ್ಕೆ ಬಂದು ಇದೇ ಪೇಟೆಯಲ್ಲಿ ಮಾರಾಟವಾಗುತ್ತದೆ. ಮಾರಾಟ ಕ್ಕಿಡುವ ಮೊದಲು ಅದು ಹಿಂದುಮುಂದಕ್ಕೆ ಎಷ್ಟು ಸಾವಿರ ಮೈಲು ತಿರು ಗಾಡಿದೆಯೊ! ಹಿಂದುಸ್ತಾನದಲ್ಲಿ ಹುಟ್ಟಿದ ಹತ್ತಿ ಬಟ್ಟೆಯಾಗಬೇಕಾದರೆ ಅಷ್ಟು ದೂರದಲ್ಲಿದ್ದ ಇಂಗ್ಲಂಡಿಗೆ ಹೋಗಿ ಅಲ್ಲಿಂದ ಇಲ್ಲಿಗೆ ಹಿಂದಿರುಗುವು ದೆಂದರೆ ಎಂತಹ ಮೂರ್ಖತನದ ಮಾತು! ಇದರಿಂದ ಕಾಲ, ಹಣ, ಶಕ್ತಿ ಎಲ್ಲವೂ ವ್ಯರ್ಥವಾಗುತ್ತದೆ. ಹತ್ತಿಯಿಂದ ಬಟ್ಟೆಗಳನ್ನು ಹಿಂದುಸ್ತಾನ ದಲ್ಲಿಯೇ ಮಾಡಿದರೆ ಅದು ಬಹಳ ಚೆಲುವಾಗಿಯೂ, ಅಗ್ಗವಾಗಿಯೂ ಆಗುತ್ತದೆ. ನಾವು ಪರದೇಶದ ಬಟ್ಟೆಯನ್ನು ಕೊಳ್ಳುವುದೂ ಇಲ್ಲ, ತೊಡು ವುದೂ ಇಲ್ಲವೆಂದು ನಿನಗೆ ಗೊತ್ತಿದೆ. ನಾವು ತೊಡುವುದು ಖಾದಿಯನ್ನು ಆದಷ್ಟುಮಟ್ಟಿಗೆ ನಮ್ಮ ದೇಶದಲ್ಲಿ ಮಾಡಿದ ಬಟ್ಟೆಬರೆಗಳನ್ನು ಹಾಕಿಕೊಳ್ಳು ವುದೇ ಹೆಚ್ಚು ಜಾಣತನದ ಮಾತು. ಇದಲ್ಲದೆ ನಾವು ಖಾದಿಯನ್ನು ಕೊಂಡು ಹಾಕಿಕೊಳ್ಳುವ ಇನ್ನೊಂದು ಕಾರಣವೆಂದರೆ, ಅದರಿಂದ ನೂಲುವ ನೇಯುವ ಬಡಬಗ್ಗರಿಗೆ ನೆರವಾದಂತಾಗುತ್ತದೆ.

ಹೀಗೆ, ವ್ಯಾಪಾರ ಬಹಳ ತೊಡಕಿನ ಮಾತೆಂಬುದು ನಿನಗೆ ಗೊತ್ತಾ ಗಿರಬಹುದು. ದೊಡ್ಡದೊಡ್ಡ ಹಡಗಗಳು ಈಗ ಪದಾರ್ಥಗಳನ್ನು ದೇಶ ದಿಂದ ದೇಶಕ್ಕೆ ಸಾಗುತ್ತಿರುತ್ತವೆ. ಆದರೆ ಮೊದಲು ಹೀಗಿರಲಿಲ್ಲ.

ಮನುಷ್ಯನು ಮೊದಲು ಬೀಡುಬಿಟ್ಟುಕೊಂಡು ನಿಂತ ಕಾಲದಲ್ಲಿ ವ್ಯಾಪಾರವೇ ಇದ್ದಿಲ್ಲ. ಅವನು ತನಗೆ ಬೇಕಾದ ಪ್ರತಿಯೊಂದು ಒಡವೆ ಯನ್ನು ತಾನೇ ಗಳಿಸಿಕೊಳ್ಳಬೇಕಾಗಿತ್ತು; ಇಲ್ಲವೆ ಮಾಡಿಕೊಳ್ಳಬೇಕಾ ಗಿತ್ತು. ಆಗ ಅವನಿಗೆ ಬಹಳ ಒಡವೆಗಳು ಬೇಕಾಗುತ್ತಲೂ ಇರಲಿಲ್ಲ. ನಾನು ನಿನಗೆ ಮೊದಲೇ ಹೇಳಿದಂತೆ ಜನರ ತಂಡದಲ್ಲಿ ದುಡಿತದ ಹಂಚಿಕೆ ಯಾಯಿತು. ಜನರು ಬೇರೆ ಬೇರೆ ಕೆಲಸಗಳನ್ನು ಕೈಕೊಂಡು ಒಡವೆಗಳನ್ನು ಮಾಡತೊಡಗಿದರು. ಒಮ್ಮೊಮ್ಮೆ ಒಂದು ತಂಡದವರಲ್ಲಿ ಒಂದು ಸಾಮಾನು ಹೇರಳವಾಗಿದ್ದು ಮತ್ತೊಂದು ತಂಡದಲ್ಲಿ ಇನ್ನೊಂದು ಸಾಮಾನು ಹೇರಳ ವಾಗಿದ್ದಿರಬಹುದು. ಆಗ ಅವರು ತಮಗೆ ಬೇಕಾದ ಸಾಮಾನುಗಳನ್ನು

ಅದಲು-ಬದಲು ಮಾಡಿಕೊಳ್ಳುತ್ತಿದ್ದರು. ಒಂದು ತಂಡದವರು ಒಂದು ಚೀಲ ಕಾಳಿಗಾಗಿ ಒಂದು ಆಕಳನ್ನು ಕೊಡುತ್ತಿದ್ದರು. ಆಗಿನ ಕಾಲದಲ್ಲಿ ಹಣವಿದ್ದಿಲ್ಲ. ಒಡವೆಗಳನ್ನು ಅದಲು-ಬದಲು ಮಾಡಿಕೊಳ್ಳುವುದೊಂದೇ ಅನುಕೂಲವಾದ ಹಾದಿಯಾಗಿತ್ತು. ಹೀಗೆ ವಿನಿಮಯ ಮೊದಲಾಯಿತು. ಇದರಿಂದ ತುಸುಮಟ್ಟಿಗೆ ಅನಾನುಕೂಲವಾಗುತ್ತಿದ್ದಿರಬಹುದು. ಒಂದು ಚೀಲ ಕಾಳು ಇಲ್ಲವೇ ಮತ್ತೇನನ್ನಾದರೂ ಪಡೆಯಬೇಕಾದರೆ ಒಂದು ಆಕಳನ್ನಾಗಲೀ ಎರಡು ಕುರಿಗಳನ್ನಾಗಲೀ ಹೊಡೆದುಕೊಂಡು ಹೋಗ ಬೇಕಾಗುತ್ತಿತ್ತು. ಹೀಗಿದ್ದರೂ ವ್ಯಾಪಾರ ಬೆಳೆಯಿತು.

ಬೆಳ್ಳಿ ಬಂಗಾರದ ಶೋಧವಾದ ಮೇಲೆ ಜನರು ಅದನ್ನು ವ್ಯಾಪಾರ ಕ್ಕಾಗಿ ಬಳಸತೊಡಗಿದರು. ಅದನ್ನು ಕೊಂಡೊಯ್ಯುವುದು ತೀರ ಹಗುರ ವಾದುದು. ಬರಬರುತ್ತ ಸಾಮಾನುಗಳಿಗಾಗಿ ಬೆಳ್ಳಿ-ಬಂಗಾರ ಕೊಡುವ ಬಳಕೆಯಾಯಿತು. ಇದನ್ನು ಮೊಟ್ಟಮೊದಲು ತಿಳಿದವನು ಬಹಳ ಚುರುಕು ಬುದ್ಧಿಯುವನಾಗಿ ಇರಬೇಡವೇ? ಬೆಳ್ಳಿ-ಬಂಗಾರದ ವಾಡಿಕೆಯಿಂದ ವ್ಯಾಪಾರ ಬಹಳ ಸುಲಭವಾಯಿತು. ಇಷ್ಟಾದರೂ ಈಗಿನಂತೆ ನಾಣ್ಯಗಳಿರ ಲಿಲ್ಲ. ಬಂಗಾರವನ್ನು ತಕ್ಕಡಿಯಲ್ಲಿ ತೂಗಿ ಕೊಡುವ ವಾಡಿಕೆ ಇತ್ತು. ಬಹಳ ಕಾಲವಾದ ಮೇಲೆ ನಾಣ್ಯಗಳು ಬಳಕೆಗೊಂಡವು. ಇದರಿಂದ ವ್ಯಾಪಾರ ವಿನಿಮಯ ಮತ್ತಷ್ಟು ಸುಲಭವಾಯಿತು. ಎಲ್ಲರಿಗೂ ನಾಣ್ಯದ ಬೆಲೆ ಗೊತ್ತಾದುದರಿಂದ ತೂಗುವುದು ಬೇಕಾಗಲಿಲ್ಲ. ಈಗ ಎಲ್ಲ ಕಡೆಯಲ್ಲಿ ನಾಣ್ಯಗಳೇ ಬಳಕೆಯಲ್ಲಿವೆ. ಬರಿಯ ಹಣ ತನ್ನಿಂದ ತಾನೇ ಏನೂ ಉಪ ಯೋಗದ್ದಲ್ಲವೆಂದು ನೀನು ನೆನಪಿನಲ್ಲಿಡಬೇಕು. ಅದು ನಮಗೆ ಬೇಕಾಗು ವುದು ಬೇಕಾದ ಸಾಮಾನನ್ನು ಕೊಂಡುಕೊಳ್ಳುವುದಕ್ಕೆ ಮಾತ್ರ. ಅದರಿಂದ ಪದಾರ್ಥಗಳ ವಿನಿಮಯಕ್ಕೆ ತುಂಬ ನೆರವುಂಟಾಗುತ್ತದೆ. ಮಿಡಸ್ ದೊರೆಯಲ್ಲಿ ಬಹಳ ಬಂಗಾರವಿತ್ತು. ಆದರೆ ಉಣ್ಣಲು ಮಾತ್ರ ಏನೂ ಇರಲಿಲ್ಲವೆಂಬ ಮಾತು ನಿನಗೆ ನೆನಪಿರಬಹುದು. ನಮಗೆ ಬೇಕಾಗುವ ಪದಾರ್ಥಗಳನ್ನು ಪಡೆಯಲು ಹಣದ ಉಪಯೋಗವಾಗದಿದ್ದರೆ ಅದು ವ್ಯರ್ಥವೇ ಸರಿ.

ಹಳ್ಳಿಪಳ್ಳಿಗಳಲ್ಲಿ ಇಂದಿಗೂ ಕೆಲವೊಮ್ಮೆ ಜನರು ಒಡವೆಗಳನ್ನು ಅದಲು-ಬದಲು ಮಾಡವುದು ನಿನ್ನ ಕಣ್ಣಿಗೆ ಬೀಳುವುದು. ಆಗ ಅವರು

ಹಣ ಕೊಡುವುದಿಲ್ಲ. ಆದರೂ ಅನುಕೂಲಕ್ಕಾಗಿ ನಾಣ್ಯಗಳೇ ವಾಡಿಕೆಯಲ್ಲಿವೆ. ಕೆಲವು ದಡ್ಡ ಜನರು ಬರಿಯ ಬಹಳ ಹಣ ಉಪಯುಕ್ತವೆಂದು ತಿಳಿಯುತ್ತಾರೆ. ಅದನ್ನು ಬಳಸದೆ ಕೂಡಿಡುತ್ತಾರೆ. ಈ ಜನರಿಗೆ ಹಣ ಮೊದಲು ಹೇಗೆ ಹುಟ್ಟಿತೆಂಬುದೂ ಅದರ ಉಪಯೋಗ ಏನೆಂಬುದೂ ತಿಳಿದಿಲ್ಲವೆಂದು ಇದರಿಂದ ಗೊತ್ತಾಗುತ್ತದೆ.

---

## ೨೩

# ಭಾಷೆ, ಬರಹ ಮತ್ತು ಸಂಖೆಗಳು

ಬೇರೆ ಬೇರೆ ಭಾಷೆಗಳನ್ನೂ ಅವುಗಳ ಪರಸ್ಪರ ಸಂಬಂಧವನ್ನೂ ನಾವು ಪರ್ಯಾಲೋಚಿಸಿದೆವು. ಇನ್ನು ಭಾಷೆ ಹೇಗೆ ಮೊದಲಾಯಿತೆಂಬುದನ್ನು ತುಸು ಯೋಚಿಸುವಾ.

ಹಲಕೆಲವು ಪಶುಗಳು ಕೆಲವು ಶಬ್ದಗಳನ್ನು ಬಳಸುತ್ತವೆಂಬುದು ನಮಗೆ ತಿಳಿದ ಮಾತು. ಮಂಗಗಳಲ್ಲಿ ಸರಳ ಮಾತುಗಳಿಗಾಗಿ ಕೆಲವು ಕೂಗುಗಳು ಅಥವಾ ನುಡಿಗಳು ವಾಡಿಕೆಯಲ್ಲಿವೆಯೆಂದು ಕೆಲವರು ಹೇಳುತ್ತಾರೆ. ಕೆಲವು ಪ್ರಾಣಿಗಳು ಭಯಗೊಂಡಾಗ ಅಥವಾ ಸಂಕಟ ಬಂದಿದೆಯೆಂದು ತಮ್ಮ ಜಾತಿಯ ಉಳಿದ ಪ್ರಾಣಿಗಳಿಗೆ ಸೂಚಿಸುವಾಗ ವಿಲಕ್ಷಣ ಧ್ವನಿ ಮಾಡುತ್ತಿರುವುದನ್ನು ನೀನು ನೋಡಿರಬಹುದು.

ಮನುಷ್ಯನಲ್ಲಾದರೂ ಮಾತುಗಳು ಹೀಗೆಯೆ ಮೊದಲಾಗಿರಬಹುದು. ಭಯಗೊಂಡಾಗ ಇಲ್ಲವೆ ಭಯವನ್ನು ಸೂಚಿಸುವಾಗ ಮೊದಲು ಬರಿಯ ಕೂಗುಗಳೆ ಬಳಕೆಯಲ್ಲಿದ್ದಿರಬಹುದು. ಅಲ್ಲಿಂದ ದಣಿವಿಕೆ ತೋರಬಾರದೆಂದು ಕೂಗು ಹಾಕುವುದು ಪ್ರಾರಂಭವಾಗಿರಬಹುದು. ಜನರು ಒಟ್ಟುಗೂಡಿ ಕೆಲಸ ಮಾಡುವಾಗ ಎಲ್ಲರೂ ಕೂಡಿ ದ್ರನಿಗೆಯ್ಯುತ್ತಾರೆ. ಯಾವುದಾದರೊಂದು ಒಡವೆಯನ್ನು ಒಟ್ಟಿಗೂಡಿ ಎಳೆಯುವುದನ್ನೂ ಇಲ್ಲವೆ ಭಾರವೆತ್ತುವುದನ್ನು ನೀನು ನೋಡಿಲ್ಲವೆ? ಒಟ್ಟಾಗಿ ಕೂಗುವುದರಿಂದ ಅವರಿಗೆ ದಣಿವು ಕಡಿಮೆಯಾಗುತ್ತದೆಂದು ತೋರುತ್ತದೆ. ಈ ದುಡಿತದ ಕೂಗಾಟಗಳೆ ಮನುಷ್ಯನಾಡಿದ ಮೊದಲನೆ ಮಾತುಗಳಾಗಿದ್ದಿರಬಹುದು.

ಬರಬರುತ್ತ ನೀರು, ಬೆಂಕಿ, ಕರಡಿ, ಕುದುರೆ ಮುಂತಾದ ಸರಳವಾದ ಮಾತುಗಳು ಹುಟ್ಟಿರಬೇಕು. ಬಹಳಮಾಡಿ ನಾಮಪದಗಳೇ ಬಳಕೆಗೊಂಡಿರಬಹುದು. ಕ್ರಿಯಾಪದಗಳು ಇದ್ದಿರಲಾರವು. ನಾನು ಕರಡಿಯನ್ನು ನೋಡಿದೆನೆಂದು ಹೇಳಬೇಕಾಗಿದ್ದರೆ ಬರಿಯ 'ಕರಡಿ' ಎಂಬ ಒಂದೇ ಶಬ್ದವನ್ನು ಹೇಳಿ ಮಕ್ಕಳಂತೆ ಬೆರಳಿನಿಂದ ತೋರಿಸುತಿದ್ದಿರಬಹುದು. ಬಹುಶಃ ಆಗ ಮಾತುಕತೆಗಳು ಇದ್ದಿರಲಿಕ್ಕಿಲ್ಲ.

ನುಡಿ ಬೆಳೆಯಿತು. ಮೊದಲು ಸಣ್ಣ ಸಣ್ಣ ವಾಕ್ಯಗಳು, ಆಮೇಲೆ ದೊಡ್ಡ ವಾಕ್ಯಗಳು ತಲೆದೋರಿದುವು. ಬೇರೆ ಬೇರೆ ಜನಾಂಗಗಳಿಗೆ ಒಂದೇ ನುಡಿ ಇದ್ದಿರಲಾರದು. ಆದರೆ ಒಂದಾನೊಂದ ಕಾಲದಲ್ಲಿ, ಹಲವಾರು ಭಾಷೆಗಳೂ ಇದ್ದಿರಲಾರವು. ನಾನು ನಿನಗೆ ಮೊದಲೇ ಹೇಳಿದಂತೆ ಆಗ ಬಹಳ ಕಡಿಮೆ ಭಾಷೆಗಳಿದ್ದುವು. ಅವು ಒಂದೊಂದಾಗಿ ಬೆಳೆದು ಭಾಷೆಗಳ ದೊಡ್ಡ ದೊಡ್ಡ ಬಳಗಗಳೇ ಆದುವು.

ನಾವು ಯೋಚಿಸುತ್ತಿರುವ ಪ್ರಾಚೀನ ಸಂಸ್ಕೃತಿಯ ಕಾಲದಲ್ಲಿ ನುಡಿ ಬಹಳ ಮುಂದುವರಿಯಿತು. ಎಷ್ಟೋ ಹಾಡುಗಳು ಹುಟ್ಟಿ ಭಟ್ಟಂಗಿಗಳು ಮತ್ತು ಹಾಡುಗಾರರು ಅವುಗಳನ್ನು ಹಾಡುತ್ತಿದ್ದರು. ಆದುದರಿಂದ ಜನರು ತಾವು ಕಲಿತುದನ್ನು ನೆನಪಿನಲ್ಲಿಡಬೇಕಾಗುತ್ತಿತ್ತು. ಪದ-ಪದ್ಯಗಳನ್ನು ನೆನಪಿನಲ್ಲಿಡುವುದು ಬಹಳ ಸುಲಭ. ಅಂತೆಯೇ ಪುರಾತನ ಸಂಸ್ಕೃತಿಗಳುಳ್ಳ ಎಲ್ಲ ದೇಶಗಳಲ್ಲಿ ಪದಗಳು ಮತ್ತು ಲಾವಣಿಗಳು ಎಲ್ಲರ ಬಾಯಲ್ಲಿದ್ದುದು ನಮಗೆ ಗೊತ್ತಾಗುತ್ತದೆ.

ಸತ್ತುಹೋದ ವೀರರ ಕೃತಿಗಳನ್ನು ಹಾಡಿ ಹೊಗಳುವುದು ಹಾಡುವವರ ಇಲ್ಲವೆ ಲಾವಣಿಕಾರರ ವಿಶೇಷವಾದ ಕೆಲಸವಾಗಿತ್ತು. ಆಗಿನ ಕಾಲದ ಜನರು ಯುದ್ಧಪ್ರಿಯರು. ಆದುದರಿಂದ ಕಾಳಗದಲ್ಲಿಯ ಶೌರ್ಯವೆ ಅದರ ಎಲ್ಲ ಪದ-ಪದ್ಯಗಳ ವಿಷಯವಾಗಿರುತಿತ್ತು. ಹಿಂದುಸ್ತಾನದಲ್ಲಿಯೂ ಇನ್ನಿತರ ದೇಶಗಳಲ್ಲಿಯೂ ಹೀಗೆ ಇದ್ದುದು ನಮಗೆ ತಿಳಿಯುತ್ತದೆ.

ಬರಹದ ಮೊದಲಿಕೆಯಾದ ಸಂಗತಿಯೂ ಬಲು ವಿಲಕ್ಷಣವಾಗಿದೆ ಚೀನದ ಲಿಪಿಯನ್ನು ಕುರಿತು ನಾನು ನಿನಗೆ ಮೊದಲೇ ಹೇಳಿರುವೆನು. ಎಲ್ಲ ಬರಹಗಳು ಮೊಟ್ಟಮೊದಲು ಚಿತ್ರಗಳಿಂದ ಮೊದಲಾಗಿರಬಹುದು. ನವಿಲಿನ ಬಗೆಗೆ ಒಬ್ಬನು ಏನಾದರೂ ಹೇಳಬೇಕಾಗಿದ್ದರೆ ಅವನು ಅದರ

ಚಿತ್ರವನ್ನು ಬರೆಯಲು ಹವಣಿಸುತ್ತಿದ್ದನು. ಆದರೆ ಈ ಪದ್ಧತಿಯಿಂದ ಬಹಳ ಬರೆಯುವುದಕ್ಕಾಗುತ್ತಿದ್ದಿಲ್ಲ. ಬರಬರುತ್ತ ಸುಲಭವಾದ ಚಿತ್ರಗಳು ತಲೆ ಎತ್ತಿದುವು. ಬಹಳ ಕಾಲದ ನಂತರ ಲಿಪಿಯು ಶೋಧವಾಯಿತು. ಇದರಿಂದ ಬರಹ ಬಹು ಸುಲಭವಾಗಿ ಅದರ ಏಳಿಗೆ ಭರದಿಂದ ಸಾಗ ತೊಡಗಿತು.

ಅಂಕೆಗಳನ್ನೂ ಎಣಿಕೆಗಳನ್ನೂ ಗೊತ್ತು ಹಚ್ಚಿದ್ದು ಒಂದು ದೊಡ್ಡ ಶೋಧನೆಯೆ ಸರಿ. ಎಣಿಕೆಯಿಲ್ಲದೆ ಎಲ್ಲ ವ್ಯವಹಾರ ಹೇಗೆ ನಡೆಯುತ್ತಿತ್ತೆಂಬುದನ್ನು ತಿಳಿದುಕೊಳ್ಳುವುದು ಕೂಡ ಬಿಗಿಯಾಗಿದೆ. ಅಂಕೆಗಳನ್ನು ಕಂಡುಹಿಡಿದವನು ಆಗಿನ ಕಾಲದಲ್ಲಿ ಬಹಳ ಚತುರನೂ ಬುದ್ಧಿವಂತನೂ ಆಗಿರಬೇಕು. ಯುರೋಪಿನಲ್ಲಿ ಮೊದಲು ಅಂಕೆಗಳು ಬಹಳ ಒರಟಾಗಿದ್ದುವು. ರೋಮನ್ ಅಂಕೆಗಳೆಂದು ಹೆಸರುಳ್ಳ ಅಂಕೆಗಳು I, II, III, IV, V, VI, VII, VIII, IX, X, ಹೀಗೆ ಇದ್ದುದು ನಿನಗೆ ಗೊತ್ತಿದೆ. ಇವು ತುಂಬ ಒರಟಾಗಿರುವವು. ಇವು ಬಳಸಲು ತೀರ ಗಡಚಾಗಿವೆ. ಈಗ ಎಲ್ಲ ಭಾಷೆಗಳಲ್ಲಿ ನಾವು ಬಳಸುತ್ತಿರುವ ಅಂಕೆಗಳು ಮೊದಲಿನವುಗಳಿಗಿಂತ ಗೆಲುವಾಗಿರುವವು. ಅವು ಯಾವುವೆಂದರೆ: ೧, ೨, ೩, ೪, ೫, ೬, ೭, ೮, ೯, ೧೦. ಹೀಗೆ ಬರೆಯುವ ಈ ಪದ್ಧತಿಗೆ ಅರಬೀ ಪದ್ಧತಿಯೆಂದು ಹೆಸರು. ಯಾಕೆಂದರೆ, ಯುರೋಪಿನ ಜನರಿಗೆ ಇವು ಗೊತ್ತಾದುದು ಅರಬ್ ದೇಶದಿಂದ. ಆದರೆ ಅರಬರು ಈ ಪದ್ಧತಿಯನ್ನು ಕಲಿತುದು ಭಾರತೀಯರಿಂದ. ಆದುದರಿಂದ ಈ ಅಂಕೆಗಳಿಗೆ ಹಿಂದುಸ್ತಾನದ ಅಂಕೆಗಳೆಂದು ಕರೆಯುವುದೇ ಹೆಚ್ಚು ಒಪ್ಪುವುದು.

ನಾನು ಈಗ ಬಹಳ ಮುಂದೆ ಹೋಗುತ್ತಿದ್ದೇನೆ. ಇನ್ನೂ ನಾವು ಅರಬರ ತನಕ ಬಂದಿಲ್ಲ.

---

## ೨೪

# ಜನರ ಬೇರೆ ಬೇರೆ ವರ್ಗಗಳು

ಹುಡಗರಿಗೂ ಹುಡುಗಿಯರಿಗೂ—ದೊಡ್ಡವರಿಗೂ ಕೂಡ—ಈಗ ಇತಿಹಾಸವನ್ನು ಕಲಿಸುವ ಪದ್ಧತಿ ಬಲು ವಿಲಕ್ಷಣವಾದುದು. ಅರಸರ ಮತ್ತು ಇನ್ನಿತರರ ಹೆಸರುಗಳು, ಯುದ್ಧದ ತಿಥಿ, ವಾರಗಳು ಮುಂತಾದ ವಿಷಯಗಳನ್ನು ಮಾತ್ರ ಅವರು ಕಲಿಯುವರು. ಆದರೆ ಕಾಳಗಗಳನ್ನೂ, ಅರಸರು ಸೇನಾಪತಿಗಳು ಮುಂತಾದ ಅತಿ ಸ್ವಲ್ಪ ಜನರ ವಿಷಯವನ್ನೂ ಕುರಿತದ್ದು ಇತಿಹಾಸವಲ್ಲ. ಇತಿಹಾಸ, ಒಂದು ನಾಡಿನ ಜನರ ಚರಿತೆಯನ್ನು, ಎಂದರೆ, ಅವರು ಹೇಗೆ ಬಾಳಿದರು, ಏನು ಮಾಡುತ್ತಿದ್ದರು, ಏನೇನು ಆಲೋಚಿಸುತಿದ್ದರು ಎಂಬುದನ್ನು ನಮಗೆ ಹೇಳಬೇಕು ಇತಿಹಾಸದಿಂದ ಅವರ ಸುಖ-ದುಃಖಗಳು, ಅವರಿಗೊದಗಿದ ಸಂಕಟಗಳು, ಅವುಗಳ ನಿವಾರಣೆಯ ಉಪಾಯಗಳು ನಮಗೆ ತಿಳಿಯಬೇಕು. ಇತಿಹಾಸವನ್ನು ಹೀಗೆ ತಿಳಿದುಕೊಂಡರೆ ಅದರಿಂದ ಎಷ್ಟೋ ವಿಷಯಗಳನ್ನು ಕಲಿಯಬಹುದು. ಇದೇ ತರದ ಕಷ್ಟಗಳು ಅಥವಾ ಕುತ್ತುಗಳು ನಮಗೆ ಒದಗಿದರೆ ಅವುಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಇತಿಹಾಸದ ಓದು ನಮಗೆ ನೆರವಾಗಬಹುದು. ಜನರು ಹೆಚ್ಚು ಹೆಚ್ಚು ಸುಧಾರಿಸುತ್ತ ನಡೆದಿರುವರೊ ಅಥವಾ ಕೆಡುತ್ತ ನಡೆದಿರುವರೊ ಎಂಬುದನ್ನು ಕಂಡುಕೊಳುವುದಕ್ಕೆ ಹಿಂದಿನ ಕಾಲದ ಅಭ್ಯಾಸವೇ ನಮಗೆ ನೆರವಾಗಬಲ್ಲುದು.

ಹಿಂದಿನ ಕಾಲದ ಮಹಾಪುರುಷರ ಮತ್ತು ಸ್ತ್ರೀಯರ ಜೀವನ ಚರಿತ್ರೆಗಳಿಂದ ನಾವು ಏನನ್ನಾದರೂ ಅರಿತುಕೊಳ್ಳಲು ಯತ್ನಿಸಬೇಕಾದುದು ಅಗತ್ಯವೇ. ಆದರೆ ಬೇರೆ ಬೇರೆ ತರದ ಜನರ ಪೂರ್ವಕಾಲದ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ನಾವು ಹವಣಿಸಬೇಕು.

ನಾನು ನಿನಗೆ ಎಷ್ಟೋ ಓಲೆಗಳನ್ನು ಬರೆದಿರುವೆನು. ಕ್ರಮಕ್ಕನುಸರಿಸಿ ಇದು ೨೦ನೆಯ ಪತ್ರ. ನಮಗೆ ವಿಶೇಷವಾಗಿ ಗೊತ್ತಾಗದ ಪುರಾತನ ಸಂಗತಿಗಳನ್ನಷ್ಟೇ ಇಲ್ಲಿಯವರೆಗೆ ನಾವು ಚರ್ಚಿಸಿದೆವು ಇದಕ್ಕೆ ಇತಿಹಾಸವೆನ್ನಲಾಗದು. ಇದಕ್ಕೆ ಇತಿಹಾಸದ ಮೊದಲಿಕೆ ಇಲ್ಲವೆ ಉದಯವೆನ್ನಬಹುದು. ನಮಗೆ ಹೆಚ್ಚಾಗಿ ಗೊತ್ತಾಗಿರುವ ಆ ಮೇಲಿನ ಕಾಲದ ಸಂಗತಿ

ಗಳನ್ನು ಇನ್ನು ಮುಂದೆ ನೋಡಿಕೊಳ್ಳೋಣ. ಈ ಕಾಲಕ್ಕೆ ಐತಿಹಾಸಿಕಕಾಲ ವೆನ್ನಬಹುದು ಪ್ರಾಚೀನ ಸಂಸ್ಕೃತಿಗಳ ವಿಷಯುಗಳನ್ನು ಮುಗಿಸುವ ಮೊದಲು ಅವುಗಳನ್ನು ಇನ್ನೊಮ್ಮೆ ನಿರೀಕ್ಷಿಸಿ ಆಗಿನ ಕಾಲದಲ್ಲಿ ಯಾವ ತೆರನಾದ ಜನರು ಇರುತ್ತಿದ್ದರೆಂಬುದನ್ನು ನೋಡಿಕೊಳ್ಳೋಣ.

ಹಿಂದನ ಕಾಲದ ಪುರಾತನ ತಂಡಗಳಲ್ಲಿ ಜನರು ಬೇರೆ ಬೇರೆ ಕೆಲಸ ಗಳನ್ನು ಹೇಗೆ ಮಾಡುತ್ತಿದ್ದರೆಂಬುದನ್ನು ನಾವು ಈಗಾಗಲೇ ನೋಡಿಕೊಂಡಿ ರುವೆವು. ಶ್ರಮವಿಭಾಗ ಅಥವಾ ದುಡಿತದ ಹಂಚಿಕೆ ಆಗ ರೂಪುಗೊಂಡಿತ್ತು. ತಂಡದ ನಾಯಕನು ಅಥವಾ ಹಿರಿಯನು ತನ್ನ ಮನೆತನವನ್ನು ಉಳಿದವ ರಿಂದ ಬೇರ್ಪಡಿಸಿಕೊಂಡನು ಅವನು ನಾಯಕತನವನ್ನಷ್ಟೆ ನೋಡುತ್ತಿ ದ್ದನು ಆದರಿಂದ ಅವನು ಮೇಲ್ತರಗತಿಯ ಮನುಷ್ಯನಾದನು. ಎಂದರೆ ಇವನ ಮನೆತನ ಉಳಿದ ಜನರಿಂದ ಬೇರೆಯಾಗಿ ಬೇರೊಂದು ವರ್ಗದಲ್ಲಿ ಸೇರತೊಡಗಿತು. ಜನರಲ್ಲಿ ಹೀಗೆ ಎರಡು ಪಂಗಡಗಳಾದುವು. ಕೆಲಸ ಗಳನ್ನು ಹಂಚಿಹಾಕುತ್ತ ಹೆಗ್ಗಡೆತನವನ್ನು ಮಾಡವುದು ಒಂದು ವರ್ಗ; ದುಡಿಯುವುದು ಮತ್ತೊಂದು ವರ್ಗ. ಕೆಲಸ ಮಾಡಿಸುವ ವರ್ಗದ ಪಾಲಿಗೆ ಅಧಿಕಾರ ತಾನಾಗಿಯೇ ಹೆಚ್ಚಿತು. ಆದರಿಂದ ಅವರು ಹುಟ್ಟುವಳಿಯೊಳ ಗಿನ ದೊಡ್ಡ ಪಾಲನ್ನು ಪಡೆಯತೊಡಗಿದುದು ಸ್ವಾಭಾವಿಕವೇ ಸರಿ. ಕೆಲಸ ಗಾರರಿಂದ ಇವರು ದಿನದಿನವೂ ಹೆಚ್ಚುಹೆಚ್ಚಾದ ಹುಟ್ಟುವಳಿಯನ್ನು ಪಡೆ ಯುತ್ತಿದ್ದುದರಿಂದ ಸಿರಿವಂತರಾದರು

ಹೀಗೆ ಶ್ರಮವಿಭಾಗಗಳಾಗುತ್ತ ನಡೆದಂತೆ ಹಲವಾರು ವರ್ಗಗಳಾ ದುವು. ಅರಸ, ಅವನ ಮನೆತನದವರು, ಅವನ ಓಲಗದವರು ಹೀಗೆ ಒಂದು ಗುಂಪು ತಲೆ ಎತ್ತಿತು. ಇವರು ದೇಶವನ್ನಾಳುತ್ತ ದೇಶಕ್ಕಾಗಿ ಕಾಳಗ ಗಳನ್ನು ಹೂಡುತ್ತಿದರು ಬೇರೆ ಕೆಲಸಗಳನ್ನು ಅವರು ಸಾಮಾನ್ಯವಾಗಿ ಮಾಡುತ್ತಿರಲಿಲ್ಲ.

ಇದಲ್ಲದೆ ಪೂಜಾರಿಗಳೂ ದೇವಾಲಯಗಳಿಗೆ ಸಂಬಂಧಿಸ ಬೇರೆ ಜನರ ಒಂದು ವರ್ಗವೂ ಹುಟ್ಟಿತು. ಆಗಿನ ಕಾಲದಲ್ಲಿ ಈ ಜನರು ಬಹು ಶ್ರೇಷ್ಠರಾಗಿದ್ದರು. ಇವರು ಮಾಡುತ್ತಿದ್ದ ಕೆಲಸವನ್ನು ಕುರಿತು ಇನ್ನೊಮ್ಮೆ ಯೋಚಿಸೋಣ.

ಮೂರನೆಯ ತರದ ಜನರೆಂದರೆ ಬಣಜಿಗರು ಅಥವಾ ವ್ಯಾಪಾರಿಗಳು.

ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಮಾರಾಟಕ್ಕಾಗಿ ಸಾಮಾನು ಗಳನ್ನು ಒಯ್ಯುತ್ತಿದ್ದ ಬಣಜಿಗ ಪಂಗಡವಿದು. ಇವರು ಅಂಗಡಿಗಳನ್ನು ಇಡುತ್ತಿದ್ದರು.

ನಾಲ್ಕನೆಯವರು ಕೈಗಾರಿಕೆಯವರು. ಇವರು ನೂಲುವರು, ನೇಯುವರು, ಗಡಿಗೆಮಡಿಕೆಗಳನ್ನು ಮಾಡುವರು, ಬೆಳ್ಳಿಬಂಗಾರದ ಕೆಲಸ ವನ್ನು ಮಾಡುತ್ತ ಅಕ್ಕಸಾಲಿಗರೆನ್ನಿಸಿಕೊಳ್ಳುರು, ಅನೇಕರೀತಿಯ ಕೆಲಸ ಮಾಡುವರು. ಈ ಜನರು ಇರುತ್ತಿದ್ದುದು ದೊಡ್ಡ ದೊಡ್ಡ ಊರುಗಳಲ್ಲಿ. ಹಳ್ಳಿಪಳ್ಳಿಗಳಲ್ಲಿಯೂ ಎಷ್ಟೋ ಜನ ನೆಲೆಗೊಂಡಿದ್ದರು.

ಹೊಲಗೆಲಸ ಮಾಡುವ ಒಕ್ಕಲಿಗರೂ ಪಟ್ಟಣಗಳಲ್ಲಿ ದುಡಿಯುವ ಕೂಲಿಕಾರರೂ ಕೊನೆಯವರು. ಇದೇ ದೊಡ್ಡದಾದ ಪಂಗಡ. ಬೇರೆ ವರ್ಗದವರೆಲ್ಲರೂ ಇವರ ಗಳಿಕೆಯೊಳಗಿನ ಏನನ್ನಾದರೂ ಪಡೆಯಲು ಹವಣಿಸುವವರೇ.

---

೨೪

## ಅರಸರು, ಗುಡಿಗಳು ಮತ್ತು ಪೂಜಾರಿಗಳು

ಈ ಜಗತ್ತಿನ ಜನರಲ್ಲಿ ಬೇರೆ ಬೇರೆ ಐದು ವರ್ಗಗಳು ಹೇಗೆ ಆದು ವೆಂಬುದನ್ನು ಹಿಂದಿನ ಓಲೆಯಿಂದ ನಾವು ತಿಳಿದುಕೊಂಡೆವು. ಇವುಗಳಲ್ಲಿ ಒಕ್ಕಲುತನ ಮತ್ತು ಕೂಲಿಮಾಡುವ ವರ್ಗವೇ ದೊಡ್ಡದು. ಒಕ್ಕಲಿಗರು ಭೂಮಿಯನ್ನು ನೇಗಿಲು ಹೊಡೆದು, ಹರಗಿ ಬಿತ್ತಿ, ಧಾನ್ಯ ಬೆಳೆಯುತಿದ್ದರು. ಇವರು ಇದನ್ನೆಲ್ಲ ಮಾಡದಿದ್ದರೆ ಅಥವಾ ಹೊಲಗಳಲ್ಲಿ ಇನ್ನಾರೂ ದುಡಿ ಯದಿದ್ದರೆ ಕಾಳುಕಡಿ ಹುಟ್ಟುತ್ತಿದ್ದಿಲ್ಲ. ಹುಟ್ಟಿದರೂ ತೀರ ಸ್ವಲ್ಪ. ಆದುದರಿಂದ ಮುಖ್ಯವಾಗಿದ್ದವರು ಒಕ್ಕಲಿಗರು, ಇವರಿಲ್ಲದಿದ್ದರೆ ಪ್ರತಿ ಯೊಬ್ಬನೂ ಉಪವಾಸ ಬೀಳುವ ಹೊತ್ತು ಬರುತ್ತಿತ್ತು. ಕೂಲಿಕಾರರು ಕೂಡ ಹೊಲಗಳಲ್ಲಿಯೂ ಪಟ್ಟಣಗಳಲ್ಲಿಯೂ ಉಪಯುಕ್ತ ಕೆಲಸವನ್ನು ಮಾಡುತ್ತಿದ್ದರು ಈ ಜನರು ಇಂತಹ ಮುಖ್ಯವಾದ ಕೆಲಸವನ್ನು ಮಾಡು ತ್ತಿದ್ದರೂ ಮತ್ತು ಪ್ರತಿಯೊಬ್ಬನಿಗೂ ಇವರು ಬೇಕಾಗಿದ್ದರೂ ಇವರಿಗೆ ಹೆಚ್ಚಿಗೆ ಏನೂ ದೊರೆಯುತ್ತಿರಲಿಲ್ಲ. ಇವರು ದುಡಿದು ಗಳಿಕೆ ಮಾಡಿ

ದುದೆಲ್ಲ ಅನ್ಯರ ಪಾಲಾಗುತಿತ್ತು. ವಿಶೇಷವಾಗಿ ಇದು ಅರಸರಿಗೆ, ಅವರ ವರ್ಗಕ್ಕೆ ಸೇರಿದ ಪಾಳಯಗಾರರಿಗೆ ಮತ್ತು ಶ್ರೀಮಂತರಿಗೆ ಸೇರುತಿತ್ತು.

ಅರಸರು ಮತ್ತು ಇವರ ವರ್ಗದವರಿಗೆ ಅಧಿಕಾರಬಲ ಹೆಚ್ಚಾಗಿತ್ತೆಂದು ನಾವು ತಿಳಿದುಕೊಂಡೆವು. ಹಿಂದಿನ ತಂಡಗಳ ಕಾಲದಲ್ಲಿ ಭೂಮಿ ಒಬ್ಬನದಾಗಿರದೆ ಇಡೀ ತಂಡದ್ದೇ ಆಗಿತ್ತು. ಆಳುವ ಈ ಅರಸುವರ್ಗ ತನ್ನ ಅಧಿಕಾರ ಬೆಳೆದಂತೆ ಭೂಮಿಯನ್ನೆಲ್ಲ ತನ್ನದು ಎಂದೆನ್ನಲಾರಂಭಿಸಿತು. ಈ ವರ್ಗಕ್ಕೆ ಸೇರಿದವರು ಜಮೀನುದಾರರು. ಹೊಲದಲ್ಲಿ ಮೈ ಬೆವರು ಸುರಿಸಿ ದುಡಿಯುವವರು ಒಂದು ಪರಿಯಿಂದ ಇವರ ಆಳುಗಳಾದರು. ಒಕ್ಕಲಿಗರು ಭೂಮಿಯಿಂದ ಬೆಳೆದದ್ದೆಲ್ಲ ಹಂಚಿಹೋಗಿ ಅದರ ಒಂದು ದೊಡ್ಡ ಪಾಲು ಈ ಜಮೀನುದಾರರಿಗೆ ದೊರೆಯತೊಡಗಿತು.

ಕೆಲವು ಗುಡಿಗಳಿಗೆ ಭೂಮಿಗಳಿದ್ದುವು. ಹೀಗೆ ಈ ಗುಡಿಗಳೂ ಭೂಮಿಯ ಒಡೆತನವನ್ನು ಹೊಂದಿದ್ದುವು.

ಈ ದೇವಾಲಯ ಹಾಗು ಪೂಜಾರಿಗಳ ವಿಷಯವನ್ನು ಈಗ ನೋಡೋಣ. ನಾನು ಬರೆದ ಪತ್ರಗಳೊಂದರಲ್ಲಿ ನಿನಗೆ ಹೀಗೆ ಹೇಳಿದ್ದೇನೆ:— ಪೂರ್ವಕಾಲದ ಕಾಡುಜನರು ಎಷ್ಟೋ ಸಂಗತಿಗಳನ್ನರಿಯದೆ ತಮಗೆ ತಿಳಿಯಲಾರದ ಪ್ರತಿಯೊಂದು ಪದಾರ್ಥದಿಂದ ಭಯಗೊಂಡರು; ಮತ್ತು ಅದರಿಂದಲೇ ದೇವತೆಗಳನ್ನೂ ಧರ್ಮಾಚರಣೆಯನ್ನೂ ಕಲ್ಪಿಸಿಕೊಂಡರು. ಅವರು ನದಿ, ಗುಡ್ಡ, ಸೂರ್ಯ, ಗಿಡ, ಪಶು ಮತ್ತು ತಮ್ಮ ಕಣ್ಣಿಗೆ ಬೀಳಲಾರದ ಎಷ್ಟೋ ವಸ್ತುಗಳಲ್ಲಿ ಗಂಡು ಹೆಣ್ಣು ದೇವತೆಗಳಿರುವರೆಂದು ಭಾವಿಸುವರು. ಇವರು ಯಾವಾಗಲೂ ಹೆದರುತ್ತಿದ್ದು ತಮ್ಮ ದೇವತೆಗಳು ತಮಗೆ ದಂಡಿಸಲು ಹವಣಿಸುತ್ತಿದ್ದಾರೆಂದು ಬಗೆಯುತ್ತಿದ್ದರು. ಇವರ ದೇವತೆಗಳೂ ಇವರಂತೆ ಕ್ರೂರರೂ ಕಡುಕರೂ ಇದ್ದರು! ಆದುದರಿಂದ ಈ ದೇವತೆಗಳ ಬಲಿಕೊಟ್ಟು ಸಮಾಧಾನ ಅಥವಾ ಸಂತೋಷಪಡಿಸಬೇಕೆಂದು ಇವರು ಹವಣಿಸುತ್ತಿದ್ದರು.

ಈ ದೇವತೆಗಳಿಗಾಗಿ ಗುಡಿಗಳಾದುವು. ಗುಡಿಯಲ್ಲಿ ಗರ್ಭಗುಡಿಯೆಂಬ ಒಂದು ಕೋಣೆ ಇರುವುದು ನಿನಗೆ ಗೊತ್ತು. ಇವರು ಪೂಜಿಸುತ್ತಿದ್ದ ಮೂರ್ತಿಯಿದ್ದುದು ಇಲ್ಲಿಯೆ. ಕಾಣದ ವಸ್ತುವನ್ನು ಪೂಜಿಸಲು ಇವರಿಗೆ ತಿಳಿಯುತ್ತಿರಲಿಲ್ಲ. ಅದು ಸ್ವಲ್ಪ ಬಿಗಿ. ಸಣ್ಣ ಮಗುವಿಗೆ

ಯಾವ ಒಡವೆ ಕಣ್ಣಿಗೆ ಬೀಳುತ್ತದೋ ಅದನ್ನೇ ಅದು ಯಾವಾಗಲೂ ಯೋಚಿಸಬಲ್ಲುದು. ಹಿಂದಿನವರಾದರೂ ಸಾಧಾರಣವಾಗಿ ಕೂಸುಗಳಂತೆಯೆ ಇದ್ದರು ಮೂರ್ತಿಗಳಿಲ್ಲದೆ ಇವರಿಂದ ಪೂಜಿಸಲಾಗುತ್ತಿದ್ದಿಲ್ಲ. ಆದುದರಿಂದ ಇವರು ತಮ್ಮ ತಮ್ಮ ಗುಡಿಗಳಲ್ಲಿ ಮೂರ್ತಿಗಳನ್ನಿಟ್ಟುಕೊಳ್ಳುತ್ತಿದ್ದರು ಈ ಮೂರ್ತಿಗಳ ರೂಪು ಒಮ್ಮೆ ಪಶುಗಳಂತಿತ್ತು; ಇನ್ನೊಮ್ಮೆ ಅರ್ಧ ಪಶು, ಅರ್ಧ ಮನುಷ್ಯನಂತೆ ಅತಿ ಕುರೂಪಿಯಾಗಿಯೂ ಇರುತ್ತಿತ್ತು. ಇದು ಬಲು ವಿಲಕ್ಷಣವಾದ ಸಂಗತಿ ಒಂದು ಕಾಲದಲ್ಲಿ ಮಿಸ್ರ ದೇಶದ ಜನರು ಬೆಕ್ಕುಗಳನ್ನು ಆರಾಧಿಸುತ್ತಿದ್ದರು. ಇನ್ನೊಂದು ಕಾಲದಲ್ಲಿ ಮಂಗವನ್ನು ಪೂಜಿಸುತ್ತಿದ್ದರೆಂದು ತೋರುತ್ತದೆ. ಈ ತರದ ಭಯಾನಕ ರೂಪವುಳ್ಳ ಮೂರ್ತಿಗಳನ್ನು ಇವರು ಏಕೆ ಪೂಜಿಸುತ್ತಿದ್ದರೆಂದು ತಿಳಿಯುವುದು ಬಲು ಕಷ್ಟ ಮೂರ್ತಿಗಳನ್ನು ಪೂಜಿಸುವುದೇ ಆದರೆ ಚೆಲುವಾದ ಮೂರ್ತಿಯನ್ನೇಕೆ ಪೂಜಿಸಬಾರದು ? ದೇವರೆಂದರೆ ಭಯಪಡಿಸುವ ಯಾವುದೊ ಒಂದು ವಸ್ತುವೆಂದು ಇವರ ಇಳಿವಳಿಕೆ ಇದ್ದಿರಬಹುದು ಅದಕ್ಕಾಗಿಯೆ ಇವರು ಅತಿ ಘೋರ ರೂಪವುಳ್ಳ ಮೂರ್ತಿಗಳನ್ನು ಮಾಡಿಕೊಂಡರು

ದೇವರು ಒಬ್ಬನೇ ಎಂದೂ ಅವನು ಸರ್ವಶಕ್ತನೆಂದೂ ಈಗಿನವರು ತಿಳಿಯುತ್ತಾರೆ. ಆಗಿನ ಕಾಲದವರು ಹಾಗೆ ತಿಳಿದಿರಲಾರರು ಅನೇಕ ಹೆಣ್ಣು ಗಂಡು ದೇವತೆಗಳಿರುವವೆಂದು ಭಾವಿಸಿದುದಲ್ಲದೆ ಅವು ತಮ್ಮತಮ್ಮಲ್ಲಿ ಕಚ್ಚಾಡುತ್ತಿರುವವೆಂದೂ ಇವರ ನಂಬಿಕೆ ಬೇರೆ ಬೇರೆ ಪಟ್ಟಣಗಳಲ್ಲಿ ಮತ್ತು ದೇಶಗಳಲ್ಲಿ ಬೇರೆ ಬೇರೆ ದೇವತೆಗಳಿದ್ದುವು

ಗುಡಿಗಳು ಪೂಜಾರಿ ಪೂಜಾರಿಣಿಯರಿಂದ ಕಿಕ್ಕಿರಿದಿದ್ದುವು. ಪೂಜಾರಿಗಳು ಸಾಮಾನ್ಯವಾಗಿ ಉಳಿದೆಲ್ಲರಿಗಿಂತ ಹೆಚ್ಚು ಓದುಬರಹ ಬಲ್ಲವರೂ, ವಿದ್ವಾಂಸರೂ ಆಗಿದ್ದರು. ಆದುದರಿಂದ ಇವರು ಅರಸರ ಸಲಹೆಗಾರರಾಗಿದ್ದರು. ಪುಸ್ತಕ ಬರೆಯುವ ಕೆಲಸವನ್ನೂ ಪ್ರತಿ ಮಾಡುವ ಕೆಲಸವನ್ನೂ ಪೂಜಾರಿಗಳೇ ಮಾಡುತ್ತಿದ್ದರು. ಇವರಿಗೆ ಕೆಲಮಟ್ಟಿನ ತಿಳಿವಳಿಕೆ ಇದ್ದುದರಿಂದ ಆಗಿನ ಕಾಲದಲ್ಲಿ ಇವರೇ ಬುದ್ಧಿವಂತರಾಗಿದ್ದರು. ಅವರಿಗೆ ವೈದ್ಯ ವೃತ್ತಿಯೂ ತಿಳಿದಿತ್ತು. ಕೆಲವು ಕಣ್ಣುಕಟ್ಟುಗಳಿಂದ ಜನರ ಮನಸ್ಸಿನ ಮೇಲೆ ಪರಿಣಾಮವನ್ನು ಉಂಟುಮಾಡುತ್ತಿದರು. ಜನರು ತಿಳಿಗೇಡಿಗಳಾದ್ದರಿಂದ ಪೂಜಾರಿಗಳು ಮಾಟಗಾರರೆಂದು ಬಗೆದು ಹೆದರಿ ನಡೆಯುತ್ತಿದ್ದರು.

ಪೂಜಾರಿಗಳು ಜನಜೀವನದಲ್ಲಿ ಪ್ರತಿಯೊಂದು ಬಗೆಯಿಂದ ಕೂಡಿ ನಡೆಯುತ್ತಿದ್ದರು. ಇವರು ತಿಳಿದವರಾದುದರಿಂದ ಬೇನೆ ಬಿದ್ದ ಇಲ್ಲವೆ ಸಂಕಟದಲ್ಲಿದ್ದ ಪ್ರತಿಯೊಬ್ಬನೂ ಇವರ ಬಳಿಗೆ ಹೋಗುತ್ತಿದ್ದನು. ಇವರು ಜನರಿಗಾಗಿ ದೊಡ್ಡ ದೊಡ್ಡ ಹಬ್ಬಗಳನ್ನೂ ಹೂಡುತ್ತಿದ್ದರು. ಸಾಮಾನ್ಯ ಜನರಿಗಾಗಿ ಆಗಿನ ಕಾಲದಲ್ಲಿ ಪಂಚಾಂಗಗಳಿದ್ದಿಲ್ಲ. ಹಬ್ಬಗಳಿಂದ ಎಣಿಕೆ ಹಾಕುತ್ತಿದ್ದರು.

ಪೂಜಾರಿಗಳು ಎಷ್ಟೋ ಸಲ ಜನರನ್ನು ಮೋಸಗೊಳಿಸುತ್ತ ತಪ್ಪು ದಾರಿಗೆ ಎಳೆಯುತ್ತಿದ್ದರು. ಆದರೂ ಇವರು ಬಗೆಬಗೆಯಿಂದ ಜನರಿಗೆ ನೆರವಾಗುತ್ತ ಜನರು ಮುಂದುವರಿಯುವಂತೆ ಮಾಡಿದರು.

ಜನರು ಮೊಟ್ಟಮೊದಲು ಪಟ್ಟಣಗಳಲ್ಲಿ ನೆಲೆಗೊಂಡ ಕಾಲದಲ್ಲಿ ನಾಡಿನ ಆಡಳಿತಗಾರರಾಗಿದ್ದವರು ಬಹುಶಃ ಈ ಪೂಜಾರಿ ವರ್ಗದವರೇ; ಅರಸರಲ್ಲ. ಅರಸರು ಆಮೇಲೆ ಮುಂದೆ ಬಂದು ಇವರನ್ನು ಹಿಂದೆ ಸರಿಸಿರ ಬಹುದು. ಯಾಕೆಂದರೆ ಅರಸರು ಪೂಜಾರಿಗಳಿಗಿಂತ ಯುದ್ಧಕಲೆಯನ್ನು ಚೆನ್ನಾಗಿ ಅರಿತಿರುವರು. ಮಿಸ್ರದೇಶದಲ್ಲಿ ಫೆರೊಗಳಂತೆ ಕೆಲವೆಡೆಗಳಲ್ಲಿ ಅರಸನೂ ಪೂಜಾರಿಯೂ ಒಬ್ಬನೇ ಆಗಿದ್ದನು. ಫೆರೊಗಳು ಬದುಕಿರುವಾಗ ಅರ್ಧ ದೇವಾಂಶರೆಂದೂ, ಅರ್ಧ ಮನುಷ್ಯರೆಂದೂ ಜನರು ತಿಳಿಯುತ್ತಿದ್ದರು. ಸತ್ತ ಕೂಡಲೇ ದೇವತೆಗಳೆಂದು ತಿಳಿದು ಇವರನ್ನು ಪೂಜಿಸುತ್ತಿದ್ದರು.

---

## ೨೬

# ಹಿನ್ನೋಟ

ನನ್ನ ಪತ್ರಗಳಿಂದ ನಿನಗೆ ಬೇಸರಿಕೆಯುಂಟಾಗಿರುವುದಲ್ಲವೆ? ನಿನಗೆ ಸ್ವಲ್ಪ ವಿಶ್ರಾಂತಿ ಬೇಕೆಂದು ನನಗೆ ತೋರುತ್ತದೆ. ಇನ್ನು ಸ್ವಲ್ಪ ಕಾಲದ ವರೆಗೆ ನಾನು ಹೊಸ ಸಂಗತಿಗಳನ್ನು ಬರೆಯುವುದಿಲ್ಲ. ನಾವು ಈವರೆಗೆ ಚರ್ಚೆಮಾಡಿದುದನ್ನಷ್ಟೆ ನೀನು ಚೆನ್ನಾಗಿ ತಿಳಿದುಕೊಂಡರೆ ಸಾಕು. ನಾವು ಕೆಲವೇ ಪತ್ರಗಳಲ್ಲಿ ಲಕ್ಷಾವಧಿ ವರುಷಗಳನ್ನು ಭರದಿಂದ ದಾಟಿ ಬಂದಿರು

ವೆವು. ಭೂಮಿ ಸೂರ್ಯನ ಒಂದಂಶವಾಗಿದ್ದ ಕಾಲದಿಂದ ನಾವು ಹೊರಟು ಅನು ಸೂರ್ಯನಿಂದ ಸಿಡಿದು ಬೇರೆಯಾಗಿ ಮೆಲ್ಲಮೆಲ್ಲನೆ ಹೇಗೆ ತಣ್ಣಗಾಗುತ್ತ ನಡೆಯಿತೆಂಬುದನ್ನು ನೋಡಿಕೊಂಡೆವು. ಆಮೇಲೆ ಚಂದ್ರನು ಭೂಮಿಯಿಂದ ಸಿಡಿದು ಬೇರೆಯಾದನು. ಭೂಮಿಯಲ್ಲಿ ಎಷ್ಟೋ ಕಾಲದ ವರೆಗೆ ಪ್ರಾಣಿಗಳ ಸುಳಿವೇ ಇದ್ದಿಲ್ಲ. ಲಕ್ಷಾವಧಿ ವರುಷಗಳಲ್ಲಿ ಪ್ರಾಣಿಗಳು ಮೆಲ್ಲಮೆಲ್ಲನೆ ಬೆಳೆಯುತೊಡಗಿದುವು. ಲಕ್ಷಾವಧಿ ವರುಷಗಳ ಕಾಲವೆಂದರೆ ಎಷ್ಟೆಂಬುದನ್ನು ನೀನು ಬಲ್ಲೆಯಾ? ಅದನ್ನು ತಿಳಿದುಕೊಳ್ಳುವದು ಗಡಚಾದ ಕೆಲಸ. ನೀನು ಬರಿಯ ಹತ್ತು ವರುಷದವಳು ಆಗಲೇ ಬೆಳೆದು ಎಷ್ಟು ದೊಡ್ಡವಳಾಗಿರುವೆಯಲ್ಲ! ನೀನು ಇನ್ನೂ ಮಗು. ನೂರು ವರುಷಗಳೆಂದರೇ ನಿನಗೊಂದು ಬಹಳ ದೊಡ್ಡದಾದ ಕಾಲ! ಆಮೇಲೆ ಒಂದು ಸಾವಿರ! ಸಾವಿರಕ್ಕೆ ನೂರುಪಟ್ಟು ಎಂದರೆ ಒಂದು ಲಕ್ಷ. ಚಿಕ್ಕದಾದ ನಮ್ಮ ತಲೆ ಇಷ್ಟು ದೊಡ್ಡ ಲೆಕ್ಕವನ್ನು ಸರಿಯಾಗಿ ತುಂಬಿಕೊಳ್ಳಲಾರದೆಂದು ನನ್ನ ತಿಳಿವಳಿಕೆ. ನಾವು ಬಹಳ ಶ್ರೇಷ್ಠರೆಂದು ತಿಳಿದುಕೊಳ್ಳುತ್ತೇವೆ. ಸಣ್ಣ ಪುಟ್ಟ ಸಂಗತಿಗಳು ಎಷ್ಟರವು? ಈ ಐತಿಹಾಸಿಕ ಯುಗಗಳೊಳಗಿನ ಹಲಕೆಲವು ಸಂಗತಿಗಳನ್ನು ಓದಿ ತಿಳಿದುಕೊಳ್ಳುವುದರಿಂದ ಅಲ್ಪ ಸಂಗತಿಗಳಿಗಾಗಿ ನಮಗೆ ಮಿಡುಕು ಉಂಟಾಗುವುದಿಲ್ಲ.

ಹಿಂದೆ, ಯಾವ ತರದ ಪ್ರಾಣಿಗಳೂ ಇಲ್ಲದ ಹಳೆಯ ಅತಿ ದೀರ್ಘ ಕಾಲವೊಂದಿತ್ತೆಂಬುದನ್ನು ನಾವು ಮರೆಯಕೂಡದು. ಸಮುದ್ರದಲ್ಲಿ ಮಾತ್ರ ಪ್ರಾಣಿಗಳಿದ್ದ ಆಮೇಲಿನ ದೀರ್ಘ ಕಾಲವನ್ನೂ ನಾವು ನೆನಪಿನಲ್ಲಿಡಬೇಕು. ಭೂಮಿಯ ಮೇಲೆ ಎಲ್ಲಿಯೂ ಆಗ ಮನುಷ್ಯನಿದ್ದಿಲ್ಲ. ಪಶುಗಳು ಹುಟ್ಟಿ ಲಕ್ಷೋಪಲಕ್ಷ ವರುಷಗಳ ತನಕ ಕಂಡಕಂಡಲ್ಲಿ ಅಡ್ಡಾಡುತ್ತಿರುವುವು. ಅವನ್ನು ಬೇಟೆಯಾಡಲು ಮನುಷ್ಯನಿಲ್ಲ ಕಟ್ಟಕಡೆಗೆ ಮನುಷ್ಯಪ್ರಾಣಿ ಬರುವನು. ಅವನು ಅನೇಕ ಪ್ರಾಣಿಗಳಿಗಿಂತ ದುರ್ಬಲನು, ಸಣ್ಣ ವಸ್ತು. ಮೆಲ್ಲಮೆಲ್ಲನೆ ಸಾವಿರಾರು ವರುಷಗಳಲ್ಲಿ ಅವನು ಬಲಗೊಳ್ಳುತ್ತ ಬುದ್ಧಿವಂತನಾಗುತ್ತ ನಡೆದನು ಕೊನೆಗೆ ಅವನೇ ಭೂಮಿಯ ಮೇಲೆ ಪ್ರಾಣಿಗಳ ಒಡೆಯನಾದನು. ಉಳಿದ ಎಲ್ಲ ಪ್ರಾಣಿಗಳು ಅವನ ಅಪ್ಪಣೆಯಂತೆ ನಡೆದುಕೊಳ್ಳುವ ಅಡಿಯಾಳಾದುವು.

ಅಲ್ಲಿಂದ ನಾಗರಿಕತೆಯ ಬೆಳವಣಿಗೆಯಾದುದು ನಮಗೆ ಕಂಡುಬರು

ತ್ತದೆ. ನಾಗರಿಕತೆಯ ತೀರ ಮೊದಲಿನ ಆರಂಭವನ್ನು ನಾವು ಈ ಮೊದಲೇ ತಿಳಿದುಕೊಂಡಿರುವೆವು. ಇನ್ನು ಮುಂದೆ ನಾವು ಅದನ್ನು ಹಿಂಬಾಲಿಸುತ್ತ ಹೋಗೋಣ. ನಾವು ಈಗ, ನಾವು ಬದುಕಿರುವ ಕಾಲಕ್ಕಿಂತ ಬರಿಯ ನಾಲ್ಕು ಅಥವಾ ಐದು ಸಾವಿರ ವರುಷಗಳ ಹಿಂದಿನ ಕಾಲದ ವರೆಗೆ ಬಂದು ಮುಟ್ಟಿರುವೆವು. ಸಂದುಹೋದ ಲಕ್ಷಾವಧಿ ವರುಷಗಳ ಸಂಗತಿಗಳಿಗಿಂತ ಈ ನಾಲ್ಕೈದು ಸಾವಿರ ವರುಷಗಳ ಸಂಗತಿಗಳು ನಮಗೆ ಹೆಚ್ಚಾಗಿ ತಿಳಿಯುತ್ತವೆ. ಮನುಷ್ಯನ ಬೆಳವಣಿಗೆಯಾದುದು ಮತ್ತು ಅವನ ಇತಿಹಾಸ ರೂಪುಗೊಂಡುದು ನಿಜವಾಗಿ ಇದೇ ಅವಧಿಯಲ್ಲಿ. ನೀನು ದೊಡ್ಡವಳಾದ ಮೇಲೆ ಈ ಇತಿಹಾಸವನ್ನು ಓದಿಕೊಳ್ಳಬಹುದು. ನಮ್ಮ ಪುಟ್ಟ ಜಗತ್ತಿನಲ್ಲಿ ಮಾನವನಿಗೆ ಯಾವ ಯಾವ ಸಂಗತಿಗಳು ಒದಗಿದುವೆಂಬುದನ್ನು ತಿಳಿಯಲು ನಿನಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ನಾನು ಬರೆಯುವೆನು.

---

## ೨೭

## ಮಿಾನುಗಲ್ಲುಗಳ ಚಿತ್ರಗಳು

ನಾನು ನಿನಗೆ ಚಿತ್ರದ ಕೆಲವು ಕಾರ್ಡುಗಳನ್ನು ಕಳಿಸಿರುವೆನು. ಬೇಸರಗೊಳಿಸುವ ಉದ್ದವಾದ ನನ್ನ ಪತ್ರಗಳಿಗಿಂತ ಹೆಚ್ಚಾಗಿ ಇವು ನಿನ್ನನ್ನು ಮೆಚ್ಚಿಸಬಹುದು! ಇವು ಲಂಡನ್ ನಗರದ ಸೌಥ್ ಕೆನ್ಸಿಂಗ್‌ಟನ್ ಸಂಗ್ರಹಾಲಯದ ಮಿಾನುಗಲ್ಲುಗಳ ಚಿತ್ರಗಳು. ನೀನು ಇವನ್ನು ಅಲ್ಲಿ ನೋಡಿರಬಹುದು. ಹಿಂದಿನಕಾಲದ ಮಿಾನುಗಳು ಹೇಗಿದ್ದುವೆಂಬುದನ್ನು ಈ ಚಿತ್ರಗಳಿಂದ ನೀನು ತುಸು ತಿಳಿದುಕೊಳ್ಳಬಹುದು.

ಗಟ್ಟಿ ಕಲ್ಲಾದ ಉಳಿದಿರುವ ಪುರಾತನ ಕಾಲದ ಪಶು, ಗಿಡ, ಬಳ್ಳಿಗಳೇ ಫಾಸಿಲ್ಲುಗಳೆಂದು ನಾನು ನಿನಗೆ ಹೇಳಿರುವೆನು. ಇವು ಗುಡ್ಡ ಮುಂತಾದ ಎಡೆಗಳಲ್ಲಿ ದೊರೆಯುವವು. ಪ್ರಾಣಿಗಳ ಮೆತ್ತಗಿನ ಭಾಗ ಉಳಿದಿರುವುದಿಲ್ಲ. ಬಿರುಸಾದ ಎಲುಬಿನ ಭಾಗಗಳು ಮಾತ್ರ ಬಹಳ ಕಾಲದ ವರೆಗೆ ಉಳಿದಿರುತ್ತವೆ. ಅವುಗಳಲ್ಲಿ ಅನೇಕ, ಸಮುದ್ರದ ತಳದಲ್ಲಿ ಮೆತ್ತಗಿನ ಒಂಡಿನಿಂದ ಮುಚ್ಚಿಹೋಗಿ ಹಾಗೆಯೆ ಉಳಿದುಕೊಂಡಿರುತ್ತವೆ. ಕಾಲ ಕಳೆದಂತೆ ಆ

ಮೆತ್ತಗಿನ ಕೆಸರು ಗಟ್ಟಿಯಾಗಿ ಸಮುದ್ರದ ತಳದಿಂದ ಹೊರಬಿದ್ದು ಒಣಗಿದ ನೆಲವಾಗುತ್ತದೆ. ಆದುದರಿಂದ ಗಟ್ಟಿ ಕಲ್ಲಾಗಿ ಉಳಿದ ಈ ಅವಶೇಷಗಳು ಒಣಗಿದ ನೆಲದಲ್ಲಿ ಈಗ ನಮಗೆ ದೊರೆಯುತ್ತವೆ.

ಗುಡ್ಡಗಳಲ್ಲಿ ದೊರೆತ ಇಂತಹ ಕೆಲವು ಅವಶೇಷಗಳು ಚಿತ್ರಗಳಲ್ಲಿವೆ. ಇವು ಅಷ್ಟು ನಿಚ್ಚಳವಾಗಿಲ್ಲ. ಇವುಗಳಲ್ಲಿ ಎರಡು ಮಾತ್ರ ಮಾದರಿಗಳಿವೆ. ಎಂದರೆ ದಿಟವಾದ ಅವಶೇಷಗಳನ್ನು ಹೋಲುವಂತೆ ರಚಿಸಲಾಗಿವೆ

ಇವುಗಳೊಳಗಿನ ಒಂದು ಅವಶೇಷದಲ್ಲಿ ಮೀನಿನ ಬರಿಯ ಹಲ್ಲುಗಳು ಮಾತ್ರ ಕಾಣುತ್ತವೆ.

ಗ ೨೦, ಮತ್ತು ಗ ೨೩, ಈ ಚಿತ್ರಗಳು ಬಹಳ ಸೊಗಸಾಗಿವೆಯೆಂದು ನನಗೆ ತೋರುತ್ತದೆ. ಮೀನುಗಳು ಗುಡ್ಡದ ಮೇಲೆ ತಮ್ಮ ಆಕಾರಗಳನ್ನು ಹೇಗೆ ಬಿಟ್ಟಿರುವವೆಂಬುದು ಇದರಿಂದ ನಿಚ್ಚಳವಾಗಿ ಕಾಣುತ್ತದೆ ಲಕ್ಷಾವಧಿ ವರುಷಗಳ ನಂತರ ಈಗಲೂ ಈ ಆಕಾರಗಳನ್ನು ನೋಡಿ ಇವು ಬದುಕಿದ್ದ ವೆಂದು ಹೇಳಬಲ್ಲೆವು.

ಈ ಚಿತ್ರದ ಕಾರ್ಡುಗಳನ್ನು ಅವುಗಳ ವಿವರಗಳನ್ನು ಬರೆದ ಕಾಗದ ಗಳೊಂದಿಗೆ, ಇತರ ಒಡವೆಗಳಲ್ಲಿ ಬೆರೆಯದಂತೆ, ಕಾಗದದ ಚೀಲದಲ್ಲಿ ಜೋಕೆಯಿಂದ ಇಟ್ಟುಕೊ.

---

## ೨೮

# ಪಳೆಯುಳಿಕೆ ಮತ್ತು ಹಾಳುಕಟ್ಟಡಗಳು

ನಾನು ನಿನಗೆ ಓಲೆ ಬರೆಯದೆ ಬಹಳ ದಿನಗಳಾದವು ನಮ್ಮ ಪತ್ರ ಗಳಲ್ಲಿ ಚರ್ಚಿಸಿದ ಹಿಂದಿನ ಕಾಲದ ಎಲ್ಲ ಸಂಗತಿಗಳನ್ನೂ ಕೊನೆಯ ಎರಡು ಪತ್ರಗಳಲ್ಲಿ ಮತ್ತೊಮ್ಮೆ ನೋಡಿಕೊಂಡಿರುವೆವು. ಮೀನುಗಲ್ಲುಗಳು ಹೇಗಿ ರುತ್ತವೆಂಬುದನ್ನು ನಿನಗೆ ತಿಳಿಯಲೆಂದು ನಾನು ನಿನಗೆ ಚಿತ್ರದ ಕೆಲವು ಕಾರ್ಡುಗಳನ್ನು ಕಳಿಸಿರುವೆನು. ನಾವಿಬ್ಬರೂ ಮಸೂರಿನಲ್ಲಿ ಕೂಡಿದ್ದಾಗ ಇತರ ಅವಶೇಷಗಳ ಚಿತ್ರಗಳನ್ನೂ ನಿನಗೆ ತೋರಿಸಿರುವೆನು.

ಉರಗ ಜಂತುಗಳ ಪಳೆಯುಳಿಕೆಗಳ ಚಿತ್ರಗಳು ನಿನ್ನ ನೆನಪಿನಲ್ಲಿರ ಬಹುದು. ಉರಗ ಜಂತುಗಳೆಂದರೆ ಹಾವು, ಹಲ್ಲಿ, ಮೊಸಳೆ ಮತ್ತು ಆವೆ

ಯಂತಹ ಸಾಮಾನ್ಯವಾಗಿ ನೆಲದ ಮೇಲೆ ತೆವಳುತ್ತ ನಡೆಯುವ ಪ್ರಾಣಿಗಳು. ಈ ಪ್ರಾಣಿಗಳ ಜಾತಿಗೆಸೇರಿದ ಬೇರೆ ಕೆಲವು ಬಹಳ ದೊಡ್ಡ ಪ್ರಾಣಿಗಳು ಹಿಂದಿನ ಕಾಲದಲ್ಲಿದ್ದುವು. ಆದರೆ ಇವು ಬಹಳ ದೊಡ್ಡವಾಗಿಯೂ ತೀರ ಬೇರೆಯಾಗಿಯೂ ಇದ್ದುವು. ಸೌಥ್ ಕೆನ್ಸಿಂಗ್‌ಟನ್ ಸಂಗ್ರಹಾಲಯದಲ್ಲಿ ದೊಡ್ಡ ಪಶುಗಳನ್ನು ನೋಡಿದ್ದು ನಿನಗೆ ನೆನಪಿರಬಹುದು. ಅವುಗಳಲ್ಲಿ ಒಂದು ೭೦-೮೦ ಅಡಿ ಉದ್ದವಿತ್ತು. ಇದಲ್ಲದೆ ಮನುಷ್ಯನಿಗಿಂತ ದೊಡ್ಡದಾದ ಕಪ್ಪೆಯೊಂದಿತ್ತು. ಅಷ್ಟೇ ದೊಡ್ಡದಾದ ಒಂದು ಆನೆಯೂ ಇತ್ತು. ಬಹು ದೊಡ್ಡ ಬಾವಲಿಗಳು ಅಲ್ಲಿ ಹಾರಾಡುತ್ತಿದ್ದುವು. ಯುಗಾನೋಡನ್ ಪ್ರಾಣಿಯೊಂದು ಎದ್ದು ನಿಂತಾಗ ಒಂದು ಸಣ್ಣ ಗಿಡವಷ್ಟು ಎತ್ತರವಾಗಿತ್ತು.

ಹಿಂದಿನ ಕಾಲದ ಹಳೆಯ ಸಸಿಗಳ ಅವಶೇಷಗಳನ್ನೂ ನೀನು ನೋಡಿರುವೆ. ಇವು ಕಲ್ಲಿನಲ್ಲಿ ಮೂಡಿದ ಸುಂದರವಾದ ಗಿಡ, ಕೊಲ್ಲೆ ಮತ್ತು ಎಲೆಗಳ ಗುರುತುಗಳು.

ಉರಗ ಜಂತುಗಳ ಎಷ್ಟೋಕಾಲದ ನಂತರ ಮೊಲೆ ಉಣಿಸುವ ಮತ್ತೊಂದು ಜಾತಿಯ ಪ್ರಾಣಿ ಹುಟ್ಟಿ ಬಂತು. ನಾವು ನೋಡುತ್ತಿರುವ ನಮ್ಮ ಸುತ್ತುಮುತ್ತಲಿದ್ದ ಎಷ್ಟೋ ಪ್ರಾಣಿಗಳು ಮತ್ತು ಮನುಷ್ಯನು ಕೂಡ ಈ ಜಾತಿಗೆ ಸೇರಿದ ಪ್ರಾಣಿಗಳು. ಆಗಿನ ಕಾಲದ ಮೊಲೆಯೂಡುವ ಪ್ರಾಣಿಗಳು ಈಗಿನ ಅದೇ ಜಾತಿಯ ಕೆಲವು ಪ್ರಾಣಿಗಳಿಗಿಂತ ಅಷ್ಟೇನೂ ಬೇರೆಯಾಗಿರಲಿಲ್ಲ. ಅವು ದೊಡ್ಡವಿದ್ದರೂ ನೆಲದಲ್ಲಿ ತೆವಳುವ ಪ್ರಾಣಿಗಳಷ್ಟು ದೊಡ್ಡವಾಗಿರಲಿಲ್ಲ. ಆಗ ಅದ್ಭುತವಾದ ಕೋರೆಗಳುಳ್ಳ ಆನೆಗಳು ಮತ್ತು ಬಹು ದೊಡ್ಡ ಕರಡಿಗಳಿದ್ದುವು.

ಮನುಷ್ಯನೂ ಅವಶೇಷವಾಗಿ ಉಳಿದುದನ್ನು ನೀನು ನೋಡಿರುವೆ. ಇವು ಸಾಮಾನ್ಯವಾಗಿ ಬರಿಯ ಡವಗೆ ಮತ್ತು ಎಲುಬುಗಳಿದ್ದುದರಿಂದ ಚಿತ್ತಾಕರ್ಷಕವಾಗಿಲ್ಲ. ಜನರು ತಮ್ಮ ಉಪಯೋಗಕ್ಕೆಂದು ಮಾಡಿಕೊಂಡಿದ್ದ ಹಳೆಗಾಲದ ಬೆಣಚುಗಲ್ಲುಗಳ ಆಯುಧಗಳು ಬಹು ಮನೋರಂಜಕವಾಗಿದ್ದುವು.

ಇಜಿಪ್ತು ದೇಶದ ಗುಮ್ಮಟ ಮತ್ತು ಹಳೆಯ ಹೆಣಗಳ ಸುಂದರವಾದ ಚಿತ್ರಗಳನ್ನು ನಾನು ನಿನಗೆ ತೋರಿಸಿರುವೆನು. ಇವುಗಳಲ್ಲಿ ಕೆಲವು ಬಹಳ ಸುಂದರವಾಗಿದ್ದುದು ನಿನಗೆ ನೆನಪಿರಬಹುದು. ಹೆಣದ ಪೆಟ್ಟಿಗೆಯ ಮೇಲೆ

ಆ ಜನರ ದೊಡ್ಡ ಕತೆಗಳನ್ನು ಚಿತ್ರಿಸಲಾಗಿದೆ. ಮಿಸ್ರ ದೇಶದ ಥೀಬ್ಸ್ (Thebes) ಎಂಬ ಸ್ಥಳದಲ್ಲಿ ಗುಮ್ಮಟಗಳ ಮೇಲಿನ ಚಿತ್ರಗು ಬಹಳ ಮನೋಹರವಾಗಿದ್ದುವು.

ಇಜಿಪ್ತಿನೊಳಗಿನ ಥೀಬ್ಸಿನ ಹಾಳು ಅರಮನೆ ಮತ್ತು ಗುಡಿಗಳ ಚಿತ್ರಗಳನ್ನು ಕೂಡ ನೀನು ನೋಡಿರುವೆ. ಅದ್ಭುತವಾದ ಕಂಬಗಳುಳ್ಳ ಭವ್ಯವಾದ ಕಟ್ಟಡಗಳಿವು. ಥೀಬ್ಸಿನ ಹತ್ತಿರ ಬಹಳ ದೊಡ್ಡ ಮೂರ್ತಿಯೊಂದಿರುವದು.

ಉತ್ತರ ಇಜಿಪ್ತಿನ ಕಾರ್ನಾಕ್ ಎಂಬಲ್ಲಿಯ ಹಾಳು ಗುಡಿಗಳ ಮತ್ತು ಕಟ್ಟಡದ ಚಿತ್ರಗಳನ್ನು ಕೂಡ ನೀನು ನೋಡಿರುವೆ. ಹಿಂದಿನ ಕಾಲದ ಮಿಸ್ರ ದೇಶದ ಗೋಡೆಕಾರರು ಕಟ್ಟುವುದರಲ್ಲಿ ಎಷ್ಟು ನಿಪುಣರಾಗಿದ್ದರೆಂಬುದನ್ನು ಈ ಹಾಳು ಗುಡಿಗಳಿಂದ ನೀನು ತುಸುಮಟ್ಟಿಗೆ ಊಹಿಸಬಹುದು. ಇವರು ಶಿಲ್ಪಶಾಸ್ತ್ರವನ್ನು ಚೆನ್ನಾಗಿ ಅರಿಯದ ಹೊರತು ಇಂತಹ ದೊಡ್ಡ ಕಟ್ಟಡಗಳನ್ನು ಕಟ್ಟುವುದು ಸಾಧ್ಯವಿರಲಿಲ್ಲ.

ನಾವು ನಮ್ಮ ಕಿರಿದಾದ ಹಿನ್ನೋಟವನ್ನು ಈಗ ಮುಗಿಸಿದೆವು. ಮುಂದಿನ ಓಲೆಯಲ್ಲಿ ನಾವು ಮುಂದಿನ ವಿಷಯವನ್ನು ನೋಡೋಣ.

---

## ೨೯

## ಹಿಂದುಸ್ತಾನಕ್ಕೆ ಆರ್ಯರು ಬಂದರು

ಇಲ್ಲಿಯ ವರೆಗೆ ನಾವು ಅತಿ ಪುರಾತನ ಕಾಲದ ಸಂಗತಿಗಳನ್ನು ಚರ್ಚಿಸಿದೆವು. ಮನುಷ್ಯನ ಬೆಳವಣಿಗೆ ಹೇಗಾಯಿತು, ಮತ್ತು ಅವನು ಏನೇನು ಮಾಡುತ್ತ ಬಂದನೆಂಬುದನ್ನು ನಾವು ಇನ್ನು ಮುಂದೆ ನೋಡೋಣ. ಈ ಎಲ್ಲ ಹಿಂದಿನ ಕಾಲಗಳಿಗೆ ಐತಿಹಾಸಿಕ ಕಾಲಕ್ಕಿಂತ ಮೊದಲಿನ ಕಾಲಗಳೆಂದು ಹೆಸರು. ಯಾಕೆಂದರೆ ಈ ಕಾಲದಲ್ಲಿ ನಿಜವಾದ ಇತಿಹಾಸವಿದ್ದಿಲ್ಲ. ಎಷ್ಟೋ ಸಂಗತಿಗಳನ್ನು ನಾವು ಊಹಿಸಬೇಕಾಗುತ್ತವೆ. ಈಗ ನಾವಿರುವುದು ಇತಿಹಾಸದ ಆಚೆಯ ತುದಿಯಲ್ಲಿ.

ಹಿಂದುಸ್ತಾನದಲ್ಲಿ ಏನಾಯಿತೆಂಬುದನ್ನು ನಾವು ಮೊದಲು ತಿಳಿದುಕೊಳ್ಳೋಣ. ಮಿಸ್ರದೇಶದಂತೆ ಬಹಳ ಪ್ರಾಚೀನ ಕಾಲದಲ್ಲಿ ಭರತಭೂಮಿಯಲ್ಲಿಯೂ ಸಂಸ್ಕೃತಿ ನೆಲೆಗೊಂಡಿದ್ದುದನ್ನು ನಾವು ಈಗಾಗಲೆ ನೋಡಿ

ಕೊಂಡಿರುವೆವು. ವ್ಯಾಪಾರ ನಡೆಯುತ್ತಿತ್ತು; ಹಡಗುಗಳು ಹಿಂದುಸ್ತಾನ ದಿಂದ ಇಜಿಪ್ಟ್, ಮೆಸಪೊಟೆಮಿಯ ಮತ್ತು ಇನ್ನುಳಿದ ನಾಡುಗಳಿಗೆ ಸರಕನ್ನು ಸಾಗಿಸಿಕೊಂಡು ಹೋಗುತಿದ್ದುವು. ಆಗಿನ ಕಾಲದಲ್ಲಿ ಹಿಂದುಸ್ತಾನದಲ್ಲಿದ್ದ ಜನರಿಗೆ ದ್ರಾವಿಡರೆಂದು ಹೆಸರು. ದಕ್ಷಿಣದಲ್ಲಿ ಮದ್ರಾಸಿನ ಸುತ್ತುಮುತ್ತು ಇರುತ್ತಿರುವ ಜನರ ಪೂರ್ವಜರೇ ಈ ದ್ರಾವಿಡರು.

ಈ ದ್ರಾವಿಡ ಜನರ ಮೇಲೆ ಆರ್ಯರು ಉತ್ತರದಿಂದ ದಾಳಿಮಾಡಿದರು. ಮಧ್ಯ ಏಸಿಯದಲ್ಲಿ ಈ ಆರ್ಯಜನರ ದೊಡ್ಡ ಗುಂಪು ಇದ್ದಿರಬಹುದು. ಇವರಿಗೆ ಸಾಕಾಗುವಷ್ಟು ಕಾಳುಕಡಿ ಹುಟ್ಟದಿದ್ದುದರಿಂದ ಇವರು ದೊಡ್ಡ ದೊಡ್ಡ ಸಮುದಾಯದೊಡನೆ ಪರ್ಸಿಯಕ್ಕೂ ಗ್ರೀಸಿಗೂ ಅದರಂತೆ ಮುಂದೆ ಅತಿ ಪಶ್ಚಿಮಕ್ಕೂ ತೆರಳಿದರು. ಇವರು ಹಿಂದುಸ್ತಾನಕ್ಕೂ ಕಾಶ್ಮೀರ ಪರ್ವತವನ್ನು ದಾಟಿ ಗುಂಪುಗುಂಪಾಗಿ ಬಂದರು.

ಆರ್ಯರು ಕದನದಲ್ಲಿ ಕಲಿಗಳು. ತಮಗೆ ಎದುರಾದ ದ್ರಾವಿಡರನ್ನು ಹಿಂದಕ್ಕಟ್ಟಿದರು ವಾಯುವ್ಯದಿಂದ ಆರ್ಯರು ತೆರೆಗಳಂತೆ ತಂಡತಂಡವಾಗಿ ಹಿಂದುಸ್ತಾನಕ್ಕೆ ಬಂದಿರಬೇಕು. ದ್ರಾವಿಡರು ಮೊದಲು ಇವರನ್ನು ತಡೆದು ಹಿಡಿದಿರಬಹುದು ಆದರೆ ಆರ್ಯರು ಹೆಚ್ಚುಹೆಚ್ಚಾಗಿ ಬರುತ್ತಿದ್ದುದರಿಂದ ಇವರನ್ನು ತಡೆಯುವುದಾಗಲಿಲ್ಲ. ಎಷ್ಟೋಕಾಲದ ವರೆಗೆ ಆರ್ಯರು ಉತ್ತರದ ಅಫಗಾಣಿಸ್ತಾನ ಮತ್ತು ಪಂಜಾಬಿನಲ್ಲಿಯೇ ಉಳಿದರು. ಅಲ್ಲಿಂದ ಈಗ ನಾವಿರುವ ಸಂಯುಕ್ತ ಪ್ರಾಂತಕ್ಕೆ ಸಾಗಿಬಂದರು. ಹೀಗೆ ಇವರು ಮಧ್ಯ ಹಿಂದುಸ್ತಾನದಲ್ಲಿರುವ ವಿಂಧ್ಯ ಪರ್ವತಗಳ ವರೆಗೆ ಹರಡುತ್ತ ನಡೆದರು. ಅಲ್ಲಿ ದಟ್ಟವಾದ ಅಡವಿಗಳಿದ್ದುದರಿಂದ ಅವುಗಳನ್ನು ದಾಟಿ ಮುಂದೆ ಹೋಗುವುದು ಬಹಳ ಗಡಚಾಗಿತ್ತು. ಆದುದರಿಂದ ಆರ್ಯರು ಎಷ್ಟೋ ಕಾಲದ ವರೆಗೆ ವಿಂಧ್ಯ ಪರ್ವತಗಳ ಉತ್ತರ ಸೀಮೆಯಲ್ಲಿಯೆ ಉಳಿದರು. ಇವರೊಳಗಿನ ಎಷ್ಟೋ ಜನರು ಈ ಅಡವಿಗಳನ್ನು ಎಷ್ಟೋ ತೊಂದರೆಗಳನ್ನು ನುಭವಿಸಿ ದಾಟಿ ದಕ್ಷಿಣಕ್ಕೆ ತೆರಳಿದರು. ಆದರೆ ಇವುಗಳನ್ನು ಜನಜಂಗುಳಿಯಿಂದ ದಾಟುವುದಾಗಲಿಲ್ಲ. ಆದುದರಿಂದ ದಕ್ಷಿಣ ಮುಖ್ಯವಾಗಿ ಬರಿಯ ದ್ರಾವಿಡರದಾಗಿಯೆ ಉಳಿಯಿತು.

ಆರ್ಯರು ಹಿಂದುಸ್ತಾನಕ್ಕೆ ಬಂದುದನ್ನು ತಿಳಿದುಕೊಳ್ಳುವುದು ಬಹಳ ಮನೋರಂಜಕವಾದ ವಿಷಯ. ನಮ್ಮ ಹಳೆಯ ಸಂಸ್ಕೃತ ಪುಸ್ತಕ

ಗಳಿಂದ ಈ ಬಗೆಗೆ ಅನೇಕ ಸಂಗತಿಗಳು ಗೊತ್ತಾಗುವವು. ವೇದ ಮೊದಲಾದ ಈ ಹಳೆಯ ಪುಸ್ತಕಗಳು ಆಗಿನ ಕಾಲದಲ್ಲಿ ರಚನೆಯಾಗಿದ್ದಿರಬೇಕು. ಋಗ್ವೇದವೆ ಎಲ್ಲಕ್ಕಿಂತ ಹಳಯ ವೇದ. ಆರ್ಯರು ನೆಲೆಗೊಂಡಿದ್ದ ಹಿಂದುಸ್ತಾನದ ಭಾಗದ ಕಲ್ಪನೆ ಇದರಿಂದ ನಿನಗೆ ಆಗುವುದು. ಇನ್ನುಳಿದ ವೇದಗಳಿಂದಲೂ ಪುರಾಣಗಳಂತಹ ಸಂಸ್ಕೃತ ಹಳೆಯ ಗ್ರಂಥಗಳಿಂದಲೂ ಆರ್ಯರು ಹೇಗೆ ಹರಡಿದರೆಂಬುದು ನಮಗೆ ಗೊತ್ತಾಗುತ್ತದೆ. ಈ ಹಳೆಯ ಪುಸ್ತಕಗಳನ್ನು ಕುರಿತು ನಿನಗೆ ಗೊತ್ತಿರಲಾರದು. ದೊಡ್ಡವಳಾದಾಗ ನಿನಗೆ ಹೆಚ್ಚಿಗೆ ಗೊತ್ತಾಗುವುದು. ಪುರಾಣದಲ್ಲಿಯ ಎಷ್ಟೋ ಕತೆಗಳು ಈಗಲೂ ನಿನಗೆ ಗೊತ್ತಿವೆ. ಬಹಳ ದಿನಗಳಾದ ಮೇಲೆ ರಾಮಾಯಣವೆಂಬ ದೊಡ್ಡ ಗ್ರಂಥವಾಯಿತು. ಅದಕ್ಕೂ ಈಚೆಯ ಕಾಲದಲ್ಲಿ ಮಹಾಭಾರತ ಹುಟ್ಟಿತು.

ಈ ಗ್ರಂಥಗಳಿಂದ ನಮಗೆ ತಿಳಿಯುವುದೇನೆಂದರೆ— ಆರ್ಯರು ಬರಿಯ ಪಂಜಾಬು ಮತ್ತು ಅಫಗಾಣಿಸ್ತಾನದಲ್ಲಿದ್ದಾಗ ಅವರು ಇದಕ್ಕೆ ಬ್ರಹ್ಮಾವರ್ತ ವೆಂದು ಕರೆಯುತ್ತಿದ್ದರು. ಆಗ ಅಫಗಾಣಿಸ್ತಾನಕ್ಕೆ ಗಾಂಧಾರವೆಂಬ ಹೆಸರಿತ್ತು. ಮಹಾಭಾರತದೊಳಗಿನ ಗಾಂಧಾರಿಯ ನೆನಪು ನಿನಗಿದೆಯೆ ? ಅವಳು ಗಾಂಧಾರ ದೇಶದವಳಾದುದರಿಂದ ಅವಳಿಗೆ ಗಾಂಧಾರಿಯೆಂಬ ಹೆಸರು ಬಂತು. ಈಗ ಅಫಗಾಣಿಸ್ತಾನ ಹಿಂದುಸ್ತಾನದಿಂದ ಬೇರೆಯಾಗಿದೆ. ಆದರೆ ಆಗ ಈ ಎರಡೂ ದೇಶಗಳು ಒಂದೇ ಆಗಿದ್ದುವು.

ಆರ್ಯರು ಇನ್ನೂ ಕೆಳಗಿಳಿದು ಗಂಗಾ ಮತ್ತು ಯಮುನಾ ನದಿಗಳ ಕೊಳ್ಳಗಳಲ್ಲಿ ಬಂದು ನೆಲೆಸಿದರು. ಆಗ ಇಡಿಯ ಉತ್ತರ ಹಿಂದುಸ್ತಾನಕ್ಕೆ "ಆರ್ಯಾವರ್ತ" ವೆಂದು ಅವರು ಹೆಸರಿಟ್ಟರು.

ಅತಿ ಪ್ರಾಚೀನ ಕಾಲದ ಜನರಂತೆ ಇವರು ನದಿಗಳ ದಂಡೆಯ ಮೇಲಿನ ಪಟ್ಟಣಗಳಲ್ಲಿಯೆ ನೆಲೆಸಿದರು. ಕಾಶಿ ಅಥವಾ ವಾರಣಾಸಿ, ಪ್ರಯಾಗ ಮತ್ತು ಇಂತಹ ಇನ್ನೂ ಹಲವು ಪಟ್ಟಣಗಳಿರುವುದು ನದಿಯ ದಡದಲ್ಲಿಯೆ.

---

## ೩೦

# ಹಿಂದುಸ್ತಾನದ ಆರ್ಯರು ಹೇಗೆ ಇದ್ದರು ?

ಆರ್ಯರು ಹಿಂದುಸ್ತಾನಕ್ಕೆ ಐದಾರು ಸಾವಿರ ವರುಷಗಳ ಹಿಂದೆ ಅಥವಾ ಅದಕ್ಕೂ ಮೊದಲು ಬಂದಿರಬೇಕು. ಇವರೆಲ್ಲರೂ ಒಟ್ಟುಗೂಡಿ ಒಂದೇ ಗುಂಪಿನಿಂದ ಬರಲಿಲ್ಲ. ಅವರು ಗುಂಪುಗುಂಪಾಗಿ, ತಂಡತಂಡವಾಗಿ, ಕುಟುಂಬದ ಹಿಂದೆ ಕುಟುಂಬವಾಗಿ ನೂರಾರು ವರುಷಗಳ ವರೆಗೆ ಇಲ್ಲಿಗೆ ಬರುತ್ತಿದ್ದಿರಬಹುದು. ಬೀಡಿಕೆಯ ಎತ್ತಿನ ಮೇಲೆ ಇಲ್ಲವೆ ಪಶುಗಳ ಬೆನ್ನಿನ ಮೇಲೆ ತಮ್ಮ ಬಾಳುವೆಯ ಎಲ್ಲ ಸಾಮಾನನ್ನು ಹೇರಿಕೊಂಡು ಈ ಜನರ ಸಾಲಿಗೆ ಸಾಲೇ ಪ್ರವಾಸಮಾಡುತ್ತಿರುವ ನೋಟವನ್ನು ಯೋಚಿಸು ಈಗಿನ ಕಾಲದ ಪ್ರವಾಸಿಗರಂತೆ ಅವರು ಬರಲಿಲ್ಲ. ಹಿಂದಿರುಗುವ ವಿಚಾರವೇ ಅವರದಿರಲಿಲ್ಲ. ಅವರು ಬಂದದ್ದು ಇಲ್ಲಿಯೆ ನೆಲೆಸಲಿಕ್ಕೆ ಇಲ್ಲವೆ ಯುದ್ಧ ಮಾಡಿ ರಣಭೂಮಿಯಲ್ಲಿ ಮಡಿಯಲಿಕ್ಕೆ ಅವರೊಳಗಿನ ಅನೇಕ ಜನರು ನಾನು ನಿನಗೆ ಈ ಮೊದಲು ಹೇಳಿದಂತೆ, ವಾಯುವ್ಯದ ಗುಡ್ಡಗಳನ್ನು ದಾಟಿ ಇಲ್ಲಿಗೆ ಬಂದರು. ಆದರೆ ಕೆಲವರು ಮಾತ್ರ ಪರ್ಸಿಯದ ಕೊಲ್ಲಿಯಿಂದ ಕಡಲ ಮೂಲಕ ಬಂದು ತಮ್ಮ ಚಿಕ್ಕ ಹಡಗುಗಳ ಆಶ್ರಯದಿಂದ ಸಿಂಧೂ ನದಿಯ ಮೇಲ್ಭಾಗಕ್ಕೆ ತೆರಳಿರಬಹುದು.

ಈ ಆರ್ಯರು ಹೇಗೆ ಇದ್ದರೆಂಬ ಬಗೆಗೆ ಇವರು ಬರೆದ ಹೊತ್ತಗೆಗಳಿಂದ ನಮಗೆ ಬೇಕಾದಷ್ಟು ತಿಳಿದುಬರುತ್ತದೆ. ವೇದಗಳಂತಹ ಕೆಲವು ಪುಸ್ತಕಗಳು ಜಗತ್ತಿನ ಅತಿ ಪುರಾತನ ಗ್ರಂಥಗಳಾಗಿರಬಹುದು. ಬಹುಶಃ ಮೊಟ್ಟಮೊದಲು ಇವು ಬರೆದಿಟ್ಟ ಹೊತ್ತಗೆಗಳಾಗಿರಲಾರವು. ಇವುಗಳನ್ನು ಬಾಯಿಪಾಠ ಮಾಡಿ ಇತರರಿಗೆ ಹಾಡಿ ಹೇಳುತ್ತಿದ್ದರು. ಇವು ಇಂಪಾಗಿ ಹಾಡಲು ಬರುವಂತೆ ಲಲಿತವಾದ ಸಂಸ್ಕೃತದಲ್ಲಿ ಬರೆಯಲಾಗಿವೆ. ಸಂಸ್ಕೃತವನ್ನು ಬಲ್ಲ ಇಂಪಾದ ದನಿಯ ಮನುಷ್ಯನೊಬ್ಬನು ವೇದಗಳನ್ನು ಹಾಡುವುದನ್ನು ಕೇಳಲು ಈಗಲೂ ಬಹಳ ಆನಂದವಾಗುತ್ತದೆ. ವೇದಗಳು ಬಲು ಪವಿತ್ರವಾದುವುಗಳೆಂದು ಹಿಂದೂ ಜನರ ತಿಳಿವಳಿಕೆ. ಆದರೆ 'ವೇದ' ವೆಂಬ ಶಬ್ದದ ಅರ್ಥವೇನು ? ವೇದವೆಂದರೆ 'ಜ್ಞಾನ', ತಿಳಿವಳಿಕೆ ಎಂದರ್ಥ. ಆಗಿನ ಕಾಲದ ಋಷಿಗಳು ಮತ್ತು ಮುನಿಗಳೆಂದೆನ್ನಿಸಿಕೊಂಡ ಬುದ್ಧಿವಂತರು

ಸಂಗ್ರಹಿಸಿದ ಜ್ಞಾನವೇ ವೇದಗಳಲ್ಲಿರುವುದು. ಆ ಕಾಲದಲ್ಲಿ ಉಗಿಬಂಡಿ, ತಂತಿ, ಅಂಚೆ, ಮತ್ತು ಚಲಚ್ಚಿತ್ರಗಳಿದ್ದಿಲ್ಲ. ಎಂದರೆ ಇವರು ಮೂರ್ಖರಿದ್ದರೆಂದರ್ಥವಲ್ಲ. ಈಗಿನ ಕಾಲದ ಬುದ್ಧಿವಂತರಿಗಿಂತ ಆಗಿನ ಕಾಲದ ಬುದ್ಧಿವಂತರು ಹೆಚ್ಚು ತಿಳಿವಳಿಕೆಯುಳ್ಳವರೆಂದು ಕೆಲವರು ತಿಳಿಯುತ್ತಾರೆ. ಆದರೆ ಇವರು ಜಾಣರಿರಲಿ, ಇಲ್ಲದಿರಲಿ; ಇವರು ರಚಿಸಿದ ಅತ್ಯದ್ಭುತ ಗ್ರಂಥಗಳನ್ನು ಮಾತ್ರ ಇಂದಿಗೂ ಬಹಳ ಜನರು ಮೆಚ್ಚುತ್ತಾರೆ. ಹಿಂದಿನ ಕಾಲದ ಈ ಜನರು ಎಷ್ಟು ಬುದ್ಧಿವಂತರಾಗಿದ್ದರೆಂಬುದು ಈ ಮಾತಿನಿಂದಲೇ ತಿಳಿಯುತ್ತದೆ.

ನಾನು ಹೇಳಿದಂತೆ ವೇದಗಳನ್ನು ಮೊಟ್ಟಮೊದಲು ಬರೆದಿಡಲಿಲ್ಲ. ಅವುಗಳನ್ನು ಬಾಯಿಯಿಂದ ಕಲಿತು, ನೆನಪಿನಲ್ಲಿಟ್ಟುಕೊಂಡು ಮುಂದಿನ ಸಂತತಿಯವರಿಗೆ ಕಲಿಸುತ್ತಿದ್ದರು. ಆಗಿನ ಜನರ ನೆನಪಿನ ಶಕ್ತಿ ಅತ್ಯದ್ಭುತವಾಗಿದ್ದಿರಬಹುದು. ಇಡಿಯ ಪುಸ್ತಕಗಳನ್ನು ನಾವು ಎಷ್ಟು ಜನರು ಪಾಠ ಮಾಡಬಲ್ಲೆವು ?

ವೇದಗಳು ರಚನೆಯಾದ ಕಾಲಕ್ಕೆ ವೈದಿಕ ಕಾಲವೆಂದು ಹೆಸರು. ಋಗ್ವೇದವೇ ಮೊದಲನೆಯ ವೇದ. ಅದು ಮಂತ್ರಗಳಿಂದಲೂ ಹಾಡುಗಳಿಂದಲೂ ತುಂಬಿದೆ. ಅವುಗಳನ್ನು ಹಿಂದಿನ ಕಾಲದ ಆರ್ಯರು ಬಹಳ ಇನಿದಾಗಿ ಹಾಡುತ್ತಿದ್ದರು. ಅವರು ಮನನೊಂದು ಮರಗುವ ಜನರಾಗಿರದೆ ಉತ್ಸಾಹಭರಿತರೂ, ಸಾಹಸಿಗರೂ, ಸಂತೋಷಭರಿತರೂ ಆಗಿದ್ದಿರಬೇಕು. ಸಂತೋಷದಿಂದಿದ್ದಾಗ ಅವರು ಸುಂದರವಾದ ಪದಗಳನ್ನು ಕಟ್ಟಿ ತಾವು ಪೂಜಿಸುತ್ತಿದ್ದ ದೇವತೆಗಳಿಗಾಗಿ ಅವುಗಳನ್ನು ಹಾಡುತ್ತಿದ್ದರು.

ಅವರು ತಮ್ಮ ಮತ್ತು ತಮ್ಮ ಜನಾಂಗದ ವಿಷಯದಲ್ಲಿ ತುಂಬ ಹೆಮ್ಮೆಯುಳ್ಳವರು. ಆರ್ಯ ಎಂಬ ಶಬ್ದದ ಅರ್ಥ ಸಂಭಾವಿತ, ಉತ್ತಮ ಎಂದಾಗುವುದು ಅವರು ಬಹಳ ಸ್ವಾತಂತ್ರ್ಯಪ್ರಿಯರು. ಹಿಂದುಸ್ತಾನದ ತಮ್ಮ ವಂಶಜರಾದ ಈಗಿನವರಂತೆ ಅವರು ಧೈರ್ಯಗೇಡಿಗಳೂ ಅಲ್ಲ; ಸ್ವಾತಂತ್ರ್ಯ ಕಳೆದುಹೋದುದರ ಪರಿವೆ ಇಲ್ಲದವರೂ ಅಲ್ಲ. ಮಾನಹಾನಿ ಇಲ್ಲವೆ ಅಡಿಯಾಳುತನಕ್ಕಿಂತ ಸಾವು ಲೇಸೆಂದು ಹಿಂದಿನ ಕಾಲದ ಆರ್ಯರು ಬಗೆಯುತ್ತಿದ್ದರು.

ಅವರು ಕದನ ಕಲಿಗಳು. ಅವರಿಗೆ ಕೆಲವು ಮಟ್ಟಿಗೆ ಭೌತಿಕಶಾಸ್ತ್ರದ ಜ್ಞಾನವಿತ್ತು. ಒಕ್ಕಲುತನದಲ್ಲಿಯೂ ಅವರು ನಿಪುಣರು. ಒಕ್ಕಲುತನಕೆ

ಸ್ವಾಭಾವಿಕವಾಗಿ ಮಹತ್ವ ಕೊಡುತ್ತಿದ್ದರು. ಆದುದರಿಂದ ಒಕ್ಕಲುತನಕ್ಕೆ ಸಹಾಯಕವಾದ ಪ್ರತಿಯೊಂದಕ್ಕೂ ಅವರು ಮಹತ್ವ ಕೊಡುತ್ತಿದ್ದರು. ದೊಡ್ಡ ಹೊಳೆಗಳಿಂದ ವೆಗ್ಗಳವಾಗಿ ನೀರು ದೊರೆಯುತ್ತಿತ್ತು. ಆದುದರಿಂದ ಅವರು ಅವುಗಳನ್ನು ತಮ್ಮ ಸ್ನೇಹಿತರು ಮತ್ತು ಉಪಕಾರಿಗಳೆಂದು ಬಗೆಯುತ್ತಿದ್ದರು. ಅವರ ನಿತ್ಯಜೀವನದಲ್ಲಿ ಮತ್ತು ಒಕ್ಕಲುತನದಲ್ಲಿ ಎತ್ತು ಆಕಳು ಬಹಳ ನೆರವಾಗುತ್ತಿದ್ದುವು. ಆಕಳು ಹಾಲು ಕೊಡುತ್ತಿದ್ದುವು. ಹಾಲಿನ ಮಹತ್ವ ಬಹಳವಿತ್ತು. ಆದುದರಿಂದ ಅವರು ಈ ಪ್ರಾಣಿಗಳನ್ನು ಪರಿಪರಿಯಿಂದ ಆರೈಕೆ ಮಾಡಿ ಅವುಗಳನ್ನು ಆದರಿಸುತ್ತಿದ್ದರು. ಆದರೆ ಬರಬರುತ್ತ ಆಕಳನ್ನು ಸಾಕಿ ಸಲಹುವ ನಿಜವಾದ ಕಾರಣವನ್ನು ಮರೆತರು; ಹಾಗು ತಮಗೆ ಕಲ್ಯಾಣವಾಗುವುದೆಂಬ ಭಾವನೆಯಿಂದ ಅವುಗಳನ್ನು ಪೂಜಿಸತೊಡಗಿದರು.

ತಾವು ಉತ್ತಮರೆಂದು ಆರ್ಯರು ಹೆಮ್ಮೆಪಡುತ್ತಿದ್ದುದರಿಂದ ಅವರು ಹಿಂದುಸ್ತಾನದ ಉಳಿದ ಜನರೊಂದಿಗೆ ಬೆರೆತು ಹೋಗಲು ಹೆದರುತ್ತಿದ್ದರು. ಹೀಗೆ ಬೆರಿಕೆಯಾಗಬಾರದೆಂದು ಅವರು ಕಟ್ಟಳೆಗಳನ್ನು ಮಾಡಿಕೊಂಡರು. ಆದುದರಿಂದ ಆರ್ಯರು ಅನ್ಯರೊಂದಿಗೆ ಮದುವೆಯಾಗುತ್ತಿರಲಿಲ್ಲ. ಇದೇ ಪದ್ಧತಿ ಬೆಳೆದು ಎಷ್ಟೋಕಾಲದ ನಂತರ ಈಗಿನ ಜಾತಿಗಳಾದುವು. ಆದರೆ ಈಗಿನ ಕಾಲದಲ್ಲಿ ಈ ಜಾತಿ ಪದ್ಧತಿ ಬಹಳ ನಗಚಾಟಿಕೆಯ ಮಾತಾಗಿದೆ. ಎಷ್ಟೋ ಜನರು ಎರಡನೆಯವರೊಂದಿಗೆ ಉಣ್ಣುವುದಕ್ಕೂ ಅವರನ್ನು ಮುಟ್ಟುವುದಕ್ಕೂ ಹೆದರುತ್ತಾರೆ. ಸುದೈವದಿಂದ ಈಗ ಇದು ಕಡಿಮೆಯಾಗುತ್ತಿದೆ.

---

೩೧

# ರಾಮಾಯಣ ಮತ್ತು ಮಹಾಭಾರತ

ವೇದಗಳು ರಚನೆಯಾದ ವೈದಿಕ ಕಾಲದ ನಂತರ ಹಿಂದುಸ್ತಾನದಲ್ಲಿ ಪೌರಾಣಿಕ ಕಾಲ ಮೊದಲಾಯಿತು. ಈ ಕಾಲದಲ್ಲಿ ಎರಡು ಮಹಾಕಾವ್ಯಗಳು ಹುಟ್ಟಿದುದರಿಂದ ಇದಕ್ಕೆ ಪೌರಾಣಿಕ ಕಾಲವೆಂದು ಹೆಸರು. ಎರಡೂ ಮಹಾಕಾವ್ಯಗಳಲ್ಲಿ ವೀರಪುರುಷರ ಚರಿತೆಗಳನ್ನು ಕಾವ್ಯರೂಪದಲ್ಲಿ ಹೇಳ

ಲಾಗಿದೆ. ರಾಮಾಯಣ ಮತ್ತು ಮಹಾಭಾರತವೆಂಬ ಎರಡು ಗ್ರಂಥಗಳು ಇವೇ. ಇವೆರಡೂ ನಿನಗೆ ಗೊತ್ತಿವೆ.

ಈ ಪೌರಾಣಿಕ ಕಾಲದಲ್ಲಿ ಆರ್ಯರು ಉತ್ತರ ಹಿಂದುಸ್ತಾನದಲ್ಲೆಲ್ಲ ವಿಂಧ್ಯಪರ್ವತದ ವರೆಗೆ ಹಬ್ಬಿದ್ದರು. ಮೊದಲೇ ಹೇಳಿರುವಂತೆ ಈ ಎಲ್ಲ ಭೂಭಾಗಕ್ಕೆ ಆರ್ಯಾವರ್ತವೆಂದು ಹೆಸರಿತ್ತು. ಈಗಿನ ಸಂಯುಕ್ತ ಪ್ರಾಂತಕ್ಕೆ ಮಧ್ಯದೇಶವೆಂದು ಹೆಸರಿತ್ತು. ಬಂಗಾಲ ದೇಶಕ್ಕೆ ವಂಗವೆನ್ನುತ್ತಿದ್ದರು.

ನೀನು ತಿಳಿಯಲಿಚ್ಛಿಸಬಹುದಾದ ಮನೋರಂಜಕವಾದ ಇನ್ನೊಂದು ಸಂಗತಿ ಇದೆ. ಹಿಂದುಸ್ತಾನದ ಪಟವನ್ನು ನೋಡಿ ಹಿಮಾಲಯ ಮತ್ತು ವಿಂಧ್ಯ ಪರ್ವತಗಳ ನಡುವೆ ಆರ್ಯಾವರ್ತ ಎಲ್ಲಿದ್ದಿರಬಹುದೆಂದು ಹುಡುಕ ತೊಡಗಿದರೆ ಅದು ಬಿದಿಗೆಯ ಚಂದ್ರನಂತೆ ನಿನಗೆ ಕಾಣುವುದು. ಆದುದ ರಿಂದ ಆರ್ಯಾವರ್ತಕ್ಕೆ ಚಂದ್ರನ ಭೂಮಿಯೆಂದು ಹೆಸರಿತ್ತು. ಇಂದು ವೆಂದರೆ ಚಂದ್ರ. ಆದುದರಿಂದ ಆರ್ಯಾವರ್ತ * ಇಂದುವಿನ ಭೂಮಿ ಯಾಗಿತ್ತು.

ಆರ್ಯರು ಬಿದಿಗೆಯ ಚಂದ್ರನನ್ನು ಬಹಳವಾಗಿ ಪ್ರೀತಿಸುತಿದ್ದರು. ಬಿದಿಗೆಯ ಚಂದ್ರನ ಆಕಾರವುಳ್ಳ ಸ್ಥಳಗಳೆಲ್ಲ ಪವಿತ್ರವಾದವುಗಳೆಂದು ಅವರು ತಿಳಿದಿದ್ದರು. ಅವರ ಎಷ್ಟೋ ಪಟ್ಟಣಗಳು ಕಾಶಿಯಂತೆ ಅರ್ಧ ಚಂದ್ರಾಕಾರವನ್ನು ಹೊಂದಿದ್ದುವು. ಅಲಹಾಬಾದಿನಲ್ಲಿ ಗಂಗೆ ಅರ್ಧ ಚಂದ್ರಾಕೃತಿಯಿಂದ ಹರಿಯುತ್ತಿರುವಳೆಂಬುದು ನಿನಗೆ ಗೊತ್ತಿದೆ.

ರಾಮಾಯಣ ರಾಮಸೀತೆಯರ ಕತೆ. ಲಂಕೆಯ, ಎಂದರೆ ಈಗಿನ ಸಿಲೋನಿನ, ಅರಸನಾದ ರಾವಣನ ಸಂಗಡ ಇವರು ಯುದ್ಧಗೈದುದರ ವರ್ಣನೆ ಇದರಲ್ಲಿದೆ. ಮೂಲ ಕತೆಯನ್ನು ಆಮೇಲೆ ಬೇರೆ ಬೇರೆ ಭಾಷೆ ಗಳಲ್ಲಿ ಬರೆದಿದ್ದಾರೆ. ಹಿಂದಿಯಲ್ಲಿ ಬರೆದ ತುಳಸೀದಾಸನ 'ರಾಮಚರಿತ ಮಾನಸ' ಎಂಬ ರಾಮಾಯಣ ಉತ್ತಮವಾದುದೆಂದು ಹೆಸರು ಪಡೆದದೆ.

ದಕ್ಷಿಣದಲ್ಲಿಯ ಮಂಗಗಳು ರಾಮನಿಗೆ ನೆರವಾದುವೆಂದೂ ಹನು ಮಂತನು ಮಂಗಗಳಲ್ಲಿ ಮಹಾವೀರನೆಂದೂ ರಾಮಾಯಣದಲ್ಲಿ ಹೇಳಿದೆ. ರಾಮಾಯಣವೆಂದರೆ ನಿಜವಾಗಿ ಆರ್ಯರು ದಕ್ಷಿಣ ದೇಶದವರೊಂದಿಗೆ ಕಾಳಗವಾಡಿದ ಕತೆ ಇದ್ದಿರಬಹುದು. ರಾವಣನು ತೆಂಕಣಿಗರ ಮುಂದಾಳಾ

* ಇಂದುವೆಂದರೆ ಇಂದಿಕೆಯನ್ನು ಪ್ರೀತಿಯಿಂದ ಕರೆಯುವ ಹೆಸರು.

ಗಿದ್ದಿರಬಹುದು. ದಕ್ಷಿಣ ಹಿಂದುಸ್ತಾನದಲ್ಲಿ ನೆಲೆಗೊಂಡಿದ್ದ ಕಪ್ಪು ಜನರೆ ಈ ಮಂಗಗಳಾಗಿರಬಹುದು.

ರಾಮಾಯಣದಲ್ಲಿ ಸುಂದರವಾದ ಕತೆಗಳು ತುಂಬಿವೆ. ಆದರೆ ಅವುಗಳನ್ನೆಲ್ಲ ನಾನು ನಿನಗೆ ಇಲ್ಲಿ ಹೇಳಬಯಸುವುದಿಲ್ಲ; ನೀನೆ ಓದಿಕೊಳ್ಳಬೇಕು.

ರಾಮಾಯಣದ ಎಷ್ಟೋ ಕಾಲದ ನಂತರ ಮಹಾಭಾರತವಾಯಿತು. ಅದು ಬಹಳ ದೊಡ್ಡ ಗ್ರಂಥ. ಅದರಲ್ಲಿರುವುದು ಆರ್ಯ-ದ್ರಾವಿಡರ ಕದನದ ಸಂಗತಿಗಳಲ್ಲ. ಆದರೆ ಆರ್ಯರು ತಮ್ಮತಮ್ಮಲ್ಲಿಯೆ ಕಾದಾಡಿದ ಕತೆ. ಕಾಳಗದ ಕತೆ ಮಾತ್ರವಲ್ಲದೆ ಅದರಲ್ಲಿ ಬಹಳ ಉದಾತ್ತವಾದ ಕತೆಗಳೂ ತತ್ವವಿಚಾರಗಳೂ ತುಂಬಿವೆ. ಇದಕ್ಕಿಂತ ಮಹತ್ವದ ಮಾತೆಂದರೆ ಭಗವದ್ಗೀತೆಯೆಂಬ ಕಾವ್ಯರತ್ನ ಅದರಲ್ಲಿರುವುದು. ಅದರಿಂದ ಅದು ನಮ್ಮೆಲ್ಲರಿಗೆ ಪ್ರೀತಿಯ ಗ್ರಂಥವಾಗಿರುವುದು.

ಹಿಂದುಸ್ತಾನದಲ್ಲಿ ಸಾವಿರಾರು ವರುಷಗಳ ಹಿಂದೆ ಬರೆದ ಗ್ರಂಥಗಳಿವು. ಮಹನೀಯರಲ್ಲದೆ ಇಂತಹ ಗ್ರಂಥಗಳನ್ನು ಯಾರು ಬರೆಯಬಲ್ಲರು? ಎಷ್ಟೋ ಹಿಂದಿನ ಕಾಲದಲ್ಲಿ ಬರೆದಿದ್ದರೂ ಹಿಂದುಸ್ತಾನದಲ್ಲಿ ಇವು ಇಂದಿಗೂ ಉಳಿದುಕೊಂಡಿರುವುವು. ಪ್ರತಿಯೊಂದು ಮಗುವಿಗೂ ಇವುಗಳ ಪರಿಚಯವಿರುವುದಲ್ಲದೆ ಬೆಳೆದು ದೊಡ್ಡವನಾದ ಪ್ರತಿಯೊಬ್ಬನೂ ಇವುಗಳಿಗೆ ತಲೆಬಾಗುತಿದ್ದಾನೆ.

ನಿನ್ನ ತಂದೆ,
ಜವಾಹರಲಾಲ

# ತಿಳಿಯದ ಶಬ್ದಗಳಿಗೆ ಅರ್ಥ

ಇಡಿಯ ಕನ್ನಡನಾಡಿನ ದೃಷ್ಟಿಯಿಂದ ಬೇರೆ ಬೇರೆ ಕಡೆಗಳಲ್ಲಿ ಪ್ರಚಾರವಿರುವ ಶಬ್ದಗಳನ್ನು ಈ ಪುಸ್ತಕದಲ್ಲಿ ಬಳಸಲಾಗಿದೆ. ಆದುದರಿಂದ ಇಲ್ಲಿಯ ಬೇರೆ ಬೇರೆ ಶಬ್ದಗಳು ಬೇರೆ ಬೇರೆಯವರಿಗೆ ತಿಳಿಯಲಾರವೆಂದು ಇವುಗಳ ಅರ್ಥ ಕೊಟ್ಟಿದೆ. ಹೀಗಿದ್ದರೂ ಕೆಲವು ಶಬ್ದಗಳು ಕೈ ತಪ್ಪಿ ಉಳಿದಿರಬಹುದು; ಎಲ್ಲ ಕಡೆಯೂ ಬಳಕೆಯಲ್ಲಿದ್ದ ಕೆಲವು ಶಬ್ದಗಳು ನುಸುಳಿ ಬಂದಿರಲೂ ಬಹುದು.

ಅಗಳು—ಅಗೆ, ತೋಡು
ಅಚ್ಚುಮನೆ—ಮುದ್ರಣಾಲಯ
ಅಡಿಯಾಳು—ದಾಸ, ಗುಲಾಮ
ಅದರು—ನಡುಗು
ಅನುವು—ಇಂಬು, ಅನುಕೂಲ
ಅರೆ—ಬಂಡೆಕಲ್ಲು
ಅವಶೇಷ—ಹಾಳಾಗಿ ಉಳಿದ ಭಾಗ
ಅಕ್ಕು—ನೀರಿನ ದಂಡೆಯಮೇಲೆ ಬೆಳೆಯುವ ಒಂದು ತರದ ಹುಲ್ಲು
ಆರೈಕೆ—ಉಪಚಾರ, ಸಾಕುವಿಕೆ
ಆಳ್ತನ—ವಶೆತನ
ಇಕ್ಕೆಲ—ಎರಡೂ ಬದಿ
ಇಡಪಿಡು—ಠೇವು ಇಡು, ಪುದುವೊಟ್ಟಿಡು ಡಿಪಾಜಿಟ್ ಇಡು
ಇನಿದು—ಸವಿ, ಮಧುರ
ಇಬ್ಬಣ—ಎರಡು ಪಂಗಡಗಳು
ಈಯು—ಮರಿಹಾಕು
ಉಡುಪು—ಬಟ್ಟೆಬರೆ, ಪೋಷಾಕು
ಉತ್ತು—ನೇಗಿಲು ಹೊಡೆದು, ಹರಗಿ, (ಉಳ್‍ಧಾತು)
ಉರಗ—ನೆಲಸವರಿ ನಡೆಯುವ ಹರಿದಾಡುವ (Reptiles)
ಉಳಿಯಿಡು—ಉಳಿತಾಯ ಮಾಡು ಉಳಿಸಿಕೊಳ್ಳು
ಉಲ್ಲೇಖ—ವರ್ಣನೆ, ಹೇಳಿಕೆ
ಒಗ್ಗು—ಸೇರು, ಮನಸ್ಸಿಗೆ ಬರು
ಒಂಡು—ಕೆಸರು
ಕಚ್ಚಾಡು—ಜಗಳಾಡು
ಕಡಿವಡೆದು—ಕಡಿದುಹೋಗಿ
ಕಣ್ಣುಕಟ್ಟು—ಮಾಟ
ಕಲೆಹಾಕು—ಕೂಡಿಸು, ರಾಶಿಮಾಡು
ಕಲ್ಲುಕುಟ್ಟಿಗ—ಕಲ್ಲಿನ ಕೆಲಸದವನು
ಕಾದಾಡು—ಯುದ್ಧಮಾಡು
ಕಾವಲುಗಾರ—ಪೋಲೀಸು
ಕಿಕ್ಕಿರಿ—ತುಂಬಿಕೊಂಡಿರು
ಕಿಚ್ಚು—ಬೆಂಕಿ, ಬೇಗೆ
ಕುಸೀದಕ—ಬ್ಯಾಂಕು
ಕುಳ—ಒಕ್ಕಲಿಗನ ಕುಟುಂಬ
ಕೂಳು—ಊಟ, ಆಹಾರ
ಕೊಲ್ಲಿ—ಅಖಾತ
ಕೊಲ್ಲೆ—ಟೊಂಗೆ, ಗೆಲ್ಲು, ಕೊಂಬೆ
ಕೊಳ—ದೊಡ್ಡಕೆರೆ, ಸರೋವರ
ಕೊಂಪೆ—ಹಾಳಾದ ಸ್ಥಳ
ಕೋವಿ—ಬಂದೂಕು
ಗಡಚು—ಬಿಗಿ, ಕಷ್ಟ
ಗಳಿಕೆ—ಗಳಿಸಿದ್ದು
ಗೂಳಿಕಾರ—ಗುಳೆಕಟ್ಟಿಕೊಂಡು ತಿರುಗುವವ

ಗೊಳೆಕಟ್ಟು—ಒಲಸೆಹೋಗು, ಒಕ್ಕಲ ಹೋಗು
ಗೆಲವು—ಮೇಲ್ತರಹದ್ದು, ಶ್ರೇಷ್ಠವಾದ್ದು
ಗೋಡೆಕಾರ—ಗೋಡೆಕಟ್ಟುವವ, ಶಿಲ್ಪಿ
ಚಾಂಗುಭಲಾ—ಜಯವಾಗಲಿ
ಚಿಪ್ಪುಗಟ್ಟು—ಚಿಪ್ಪಿನಂತೆ ಗಟ್ಟಿಯಾಗು
ಚುಕ್ಕೆ—ನಕ್ಷತ್ರ
ಜಂಗುಳಿ—ಗುಂಪು
ಜರಿ—ಜಾರು
ಜಲ್ಲಿ—ಎಲುಬು ಇಲ್ಲದ ಮೆತ್ತಗಿರುವ ಒಂದು ತರದ ಸಮುದ್ರ ಪ್ರಾಣಿ
ಜಲ್ಲಿಮೀನು—ಒಂದುಜಾತಿಯ ಮೀನು
ಜವ್ರಗು—ಜವಳು
ಡವಗೆ—ತಲೆಬುರುಡೆ
ತರುಬು—ಅಡ್ಡಗಟ್ಟು
ತಲೆಬಟ್ಟು—ಬೇಸರ
ತವೆ—ಹಂಚು
ತೆಂಕಣಿಗ—ದಕ್ಷಿಣದವನು
ತೆವಳು—ಹೊಟ್ಟೆಹೊಸೆ
ತೊಡಗು—ಮಗ್ನನಾಗು
ದಣಿವಿಕೆ—ಆಯಾಸ
ದರಿ—ಕಂದರ
ದಾವತಿ—ದಣಿವು, ಆಯಾಸ
ದಾಳಿಡು—ಏರಿಬರು, ದಾಳಿಮಾಡು
ದೊಡ್ಡತನ—ಶ್ರೇಷ್ಠತೆ
ನಡೆವಳಿ—ನಡತೆ, ವರ್ತನೆ
ನಡೆವಳಿಸು—ನಡೆ, ವರ್ತಿಸು
ನವಿ—ಸಣ್ಣ ನಾವು
ನವಿಯಾಡಿಸು—ನಾವನ್ನು ತಿರುಗಾಡಿಸು
ನಿಚ್ಚಳ—ಸ್ಪಷ್ಟ
ನೀರ್ಮನೆ—ಬಚ್ಚಲುಮನೆ, ಸ್ನಾನಗೃಹ
ನೀರ್ಬೆಟ್ಟ—ಕಡಲಿನಲ್ಲಿರುವ ಬೆಟ್ಟ
ನೆಲಸವರು—ಹರಿದಾಡು
ಪರಿವೆ—ಗೊಡವೆ, ಸಂಬಂಧ
ಪಳಗಿಸು—ಶಿಕ್ಷಣ ಕೊಡು, ಸಾಧು ಮಾಡು, ಸಾಕು
ಪಳಗು—ಜಾಣನಾಗು, ನುರಿ
ಪಳೆಯುಳಿಕೆ—ಫಾಸಿಲ್ಲು, ಅವಶೇಷ
ಪಾಳಯ—ಸಂಸ್ಥಾನ
ಪ್ರಯೋಗ—ಕಣ್ಣೆದುರಿಗೇ ಮಾಡಿ ತೋರಿಸುವುದು
ಬಗೆ—ತಿಳಿದುಕೊಳ್ಳು, ರೀತಿ, ವಿಷಯ
ಬಡಗಣವರು—ಉತ್ತರದವರು
ಬಣಜಿಗ—ವ್ಯಾಪಾರಿ
ಬರಗೆಡು—ಹಸಿವೆಯಿಂದ ಬಳಲು, ಉಪವಾಸ ಬೀಳು
ಬಸಿರು—ಗರ್ಭ
ಬಳಕೆ—ಉಪಯೋಗ, ರೂಢಿ, ಖರ್ಚು
ಬಳಗ—ಸಂಬಂಧ
ಬಳಸು—ಉಪಯೋಗಿಸು
ಬಿಡುವು—ವಿಶ್ರಾಂತಿ
ಬೀಡಿಕೆ—ಹೇರಾಟ, ಹೇರುವುದು
ಬೀಳು—ಹಾಳು
ಬೀಳ್ಪಡೆ—ಹಾಳುಸ್ಥಿತಿ
ಬೆಡಗು—ಬಣ್ಣ, ತಂಡ
ಬೆರಿಕೆ—ಮಿಶ್ರಣ, ಕೂಡಿಕೊಳ್ಳುವುದು
ಬೇರ್ಪಡು—ಬೇರೆಯಾಗು
ಬೋನ—ಅನ್ನ, ಆಹಾರ
ಮಡಿಗೂದಲು—ಡೊಂಕು ಕೂದಲು
ಮಂದಟ್ಟಾಗು—ಖಂಡಿತವಾಗು
ಮರಳುತನ—ಹುಚ್ಚುತನ
ಮಾರ್ಪಡು—ಬದಲಾಗು
ಮಾರ್ಪಾಡು—ಬದಲಾವಣೆ
ಮಾಸುಗೆಂಪು—ನಸುಗೆಂಪು

ಮಿಡುಕು—ದುಃಖ
ಮಿಣ್ಣೆ—ಬೆನಕ, ಹೊಳೆಯ ದಂಡೆಯ ನುಣುಪಾದ ಚಿಕ್ಕ ಕಲ್ಲು
ಮಿನುಗು—ಮಿಂಚು (Twinkle)
ಮಿಸುನಿ—ಬಂಗಾರ
ಮೀನುಗಲ್ಲು—ಮೀನುಗಳ ಅವಶೇಷವುಳ್ಳ ಕಲ್ಲು
ಮೆದೆ—ನೀರಿನಲ್ಲಿ ಬೆಳೆಯುವ ಹುಲ್ಲು
ಮೊಕನಾಯಕ—ಮುಂದಾಳು, ಹಿರಿಯ ಹುದ್ದರಿ
ಮೊದಲಿಕೆ—ಆರಂಭ
ಮೊಲೆಯೂಡು—ಮೊಲೆಯುಣಿಸು
ಲಂಚಗೊಳು—ಲಂಚವೆಂದು ಕೊಟ್ಟು ಕೊಳು
ವಿಕಾಶ—ಬೆಳವಣಿಗೆ, ಅರಳುವಿಕೆ
ವೆಗ್ಗಳ—ಬಹಳ, ವಿಪುಲ
ವೆಚ್ಚಿಸು—ವೆಚ್ಚಮಾಡು
ಶಾಸನ—ಕಟ್ಟಳೆ, ಕಾಯಿದೆ
ಸದೆ—ಕಸಕಡ್ಡಿ, ಕಳೆ
ಸಲಕರಣೆ—ಸಾಮಗ್ರಿ, ಉಪಕರಣೆ
ಹಚ್ಚಗೆ—ಹಸುರಾಗಿ
ಹತ್ತಿರಿಸು—ಹತ್ತಿರ ಬರು
ಹರಗು—ನೇಗಿಲು ಹೊಡೆ, ಉಳು
ಹರವು—ಹಬ್ಬು, ಪಸರಿಸು
ಹವಣಿಕೆ—ಯತ್ನ
ಹರವು—ಅಗಲ
ಹರಿ—ಪ್ರವಾಹ, ಹೊನಲು
ಹಳಗಾಲ—ಪ್ರಾಚೀನಕಾಲ
ಹಾಯಿ—ಗಾಳಿಯ ಅನುಕೂಲತೆಗಾಗಿ ದೋಣಿಯ ನಡುಗಂಬಕ್ಕೆ ಕಟ್ಟಿದ ಪಟ
ಹಾವಳಿ—ತೊಂದರೆ, ಕಾಟ
ಹಾವುರಾಣಿ—ಹಾವಿನ ಮರಿಯಂತಿರುವ ಒಂದು ಹುಳ
ಹಾಳೆ—ಕಾಗದ
ಹಿಂಜು—ಬಿಡಿಸು
ಹಿರಿಯತನ—ಮುಂದಾಳುತನ
ಹಿರಿಹೊಳೆ—ದೊಡ್ಡ ಹೊಳೆ
ಹುಂಡಿ—ಚಕ್ರ
ಹುದುಗು—ಅಡಗು, ಮುಚ್ಚು
ಹುಳುತು—ಹುಳಹಿಡಿದು, ಹುಳಕಿಂದು
ಹೂಡಿಕೆ—ಆರಂಭ, ಮೊದಲಿಕೆ
ಹೂಡೆ—ಬುರುಜು (Tower)
ಹೆಕ್ಕು—ಆರಿಸು
ಹೆಗ್ಗಡೆ—ನಾಯಕ, ಮುಂದಾಳು
ಹೆರರು—ಪರಕೀಯರು
ಹೆರು—ಈಯು, ಹಡೆ
ಹೇರಳ—ವಿಪುಲ, ಬಹಳ
ಹೊಟ್ಟೆಸುಡು—ಉಪವಾಸ ಬೀಳು, ಬರಗೆಡ
ಹೊತ್ತಗೆ—ಪುಸ್ತಕ
ಹೊಂದಿಕೆ—ವ್ಯವಸ್ಥೆ
ಹೊಂದಿಕೊಳ್ಳು—ಅವಲಂಬಿಸು
ಹೊಸೆದಾಡು—ತಿಕ್ಕಾಡು
ಹೋರೆ—ಉದ್ಯೋಗ, ಕೆಲಸ